| SL. No. | DATE | DAYS | PUBLIC HOLIDAYS |
|---|---|---|---|
| 11 | 15.08.2008 | Friday | Independence Day. |
| 12 | 03.09.2008 | Wednesday | Varasiddhi Vinayak Vrata. |
| 13 | 29.09.2008 | Monday | Mahalaya Amavasye |
| 14 | 02.10.2008 | Thursday | Khutub-E-Ramzan / Mahatma Gandhi Jayanthi. |
| 15 | 08.10.2008 | Wednesday | Mahanavami Ayudha Pooja. |
| 16 | 09.10.2008 | Thursday | Vijayadashami |
| 17 | 27.10.2008 | Monday | Naraka Chaturdashi |
| 18 | 29.10.2008 | Wednesday | Balipadyami Diwali |
| 19 | 01.11.2008 | Saturday | Kannada Rajyotsava. |
| 20 | 08.12.2008 | Monday | Bakrid |
| 21 | 25.12.2008 | Thursday | Christmas |

**Note:**

1) This list does not include last day of Moharam (20.01.2008) which falls on Sunday.
2) Government offices will be closed through out the State on General Holidays. However Heads of Department should make necessary arrangements for the discharge of urgent work.
3) If any of the Muslim Holidays notified above does not fall on the date notified Muslims in Government Service may be granted Holiday on the date of observance in lieu of the holidays already notified.
4) Local holidays, are declared for Kodagu District only on account of Tula Sankramana 17.10.2008 (Friday) and Huthri Festival on 12-12-2008 (Friday).
5) Separate list of Holidays will be published by the Commissioner of Public Instructions, Bangalore for the Education Department.
6) In addition to the General holidays the State Government employees may utilize any of the Restricted Holidays not exceeding two days during the year 2008 with previous permission from the authority who is authorised to sanction casual leave.

By order and in the name of President of India,
**C.R. RAVINDRA**
Under Secretary to Government
Dept. of Personnel & Administrative Reforms
(State Protocol-1)

**ANNEXURE TO NOTIFICATION – I**

**NO.DPAR 12 HHL 2007, Bangalore, Dated :4th December, 2007**

List of Restricted Holidays for the State Government Employees for the year 2008.

| Sl. No. | Date | Days | Restricted Holidays |
|---|---|---|---|
| 1 | 01.01.2008 | Tuesday | New Year Day |
| 2 | 15.02.2008 | Friday | Madhwa Navami |
| 3 | 22.03.2008 | Saturday | Holy Saturday |
| 4 | 09.05.2008 | Friday | Shri Ramanujacharya Jayanti |
| 5 | 19.05.2008 | Monday | Buddha Poornima |
| 6 | 16.08.2008 | Saturday | Rug Upakarma/Yujur Upakarma |
| 7 | 18.08.2008 | Monday | Shab-e-barat |
| 8 | 23.08.2008 | Saturday | Shri Krishna Janmashtami |
| 9 | 02.09.2008 | Tuesday | Swarna Gowri Vrata |
| 10 | 12.09.2008 | Friday | Tiru Onam |
| 11 | 26.09.2008 | Friday | Jumat-Ul-Vida |

| Sl. No. | Date | Days | Restricted Holidays |
|---|---|---|---|
| 12 | 27.09.2008 | Saturday | Shab-E.Khader |
| 13 | 17.10.2008 | Friday | Tula Sankramana |
| 14 | 13.11.2008 | Thursday | Gurunanak Jayanti. |
| 15 | 15.11.2008 | Saturday | Bhakta Kanakadasa Jayanti. |
| 16 | 12.12.2008 | Friday | Huttari Festival. |
| 17 | 24.12.2008 | Wednesday | Christmas Eve. |

This list does not include Holi Festival (21.03.2008) Sri Ramanavami (14.04.2008), Varamahalakshmi Vrata (15.08.2008) which falls on General Holidays and Souraman Ugadi (13.04.2008), Ananth Padmanabha Vrata (14.09.2008) which falls on Sundays and Shri Shankaracharya Jayanti (10.05.2008) which falls on Second Saturday.

By order and in the name of President of India,

**C.R. RAVINDRA**

Under Secretary to Government

Dept. of Personnel & Administrative Reforms (State Protocol-1)

**NOTIFICATION-II**

**NO.DPAR 12 HHL 2007, Bangalore, Dated :4th December, 2007**

Under the explanation of Section 25 of the Negotiable Instruments Act 1881 (Act No.XXVI of 1881) read with Notification No.20/25/26/Pub-1 dt.15.6.1957 of the Government of India Ministry of Home Affairs the following shall be Public Holidays throughout the State of Karnataka during the year 2008.

All Sundays and the following days.

| SL. No. | DATE | DAYS | PUBLIC HOLIDAYS |
|---|---|---|---|
| 1 | 26.01.2008 | Saturday | Republic Day. |
| 2 | 05.03.2008 | Wednesday | Maha Shivaratri. |
| 3 | 21.03.2008 | Friday | Good Friday |
| 4 | 22.03.2008 | Saturday | Id-milad |
| 5 | 01.04.2008 | Tuesday | Yearly closing of Bank Accounts |
| 6 | 07.04.2008 | Monday | Chandramana Ugadi. |
| 7 | 14.04.2008 | Monday | Dr. Ambedkar Jayanthi |
| 8 | 01.05.2008 | Thursday | May Day |
| 9 | 15.08.2008 | Friday | Independence Day. |
| 10 | 03.09.2008 | Wednesday | Varasiddhi Vinayak Vrata. |
| 11 | 30.09.2008 | Tuesday | Half- yearly closing of Bank Accounts |
| 12 | 02.10.2008 | Thursday | Khutub-E-Ramzan / Mahatma Gandhi Jayanthi. |
| 13 | 09.10.2008 | Thursday | Vijayadashami |
| 14 | 29.10.2008 | Wednesday | Balipadyami Diwali |
| 15 | 01.11.2008 | Saturday | Kannada Rajyotsava. |
| 16 | 08.12.2008 | Monday | Bakrid |
| 17 | 25.12.2008 | Thursday | Christmas |

1) These Holidays are restricted to 17 days as per the directions of Banking Division, Government of India, and declared in consultation with the Regional Office of the Reserve Bank of India. Banks working on Sundays or any festival days which falls on Government holidays will seek clarification from their headquarters regarding alternate arrangements to be made for those days.
2) These holidays are declared for closing of Accounts of Commercial Banks and Co-operative Banks. The Reserve Bank of India will be functioning on these days. There is however no change in the day of closing of Accounts of Reserve Bank of India which continues to be 30th June and 31st December (However if these days are Sundays or General Holidays, the last working day of the month will be the day for Closing of Accounts).

By order and in the name of President of India,

**C.R. RAVINDRA**

PR-1555

Under Secretary to Government

Dept. of Personnel & Administrative Reforms (State Protocol-1)

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ನಡವಳಿಕೆಗಳು**

**ವಿಷಯ:** ಚನ್ನೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ, ಚನ್ನೇನಹಳ್ಳಿ, ತುಮಕೂರು ತಾ: ಈ ಸಂಘದ ಆಡಳಿತ ಮಂಡಳಿಯು ಎಡೆ ಬಿಡದೆ ಎಸಗುತ್ತಿರುವ ಕರ್ತವ್ಯ ಲೋಪಗಳಿಗೆ ಕಲಂ 30(1) ರನ್ವಯ ಕ್ರಮವಿಡುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ವರದಿ ಸಂಖ್ಯೆ ಸನಿ-32 2006 ದಿನಾಂಕ24.3.2007

2) ಈ ಕಛೇರಿ ಕಾರಣಕೇಳಿ ನೋಟೀಸ್ ಸಂಖ್ಯೆ/ಡಿಆರ್‌ಟಿ/ಅ.ರ/01/2007-08. ದಿನಾಂಕ: 4.4.2007

**ಪ್ರಸ್ತಾವನೆ :**

ಚನ್ನೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ, ಮಷಣಾಪುರ ತುಮಕೂರು ಈ ಸಂಘದ ಲೆಕ್ಕ ಪತ್ರಗಳನ್ನು ದಿ:15.3.2006 ರಂದು ಪರಿವೀಕ್ಷಣೆ ಮಾಡಿದ್ದು, ಪರಿವೀಕ್ಷಣಾ ಸಮಯದಲ್ಲಿ ಸಂಘದ ಆಡಳಿತ ಮಂಡಳಿ ಸದಸ್ಯರು ಸಹಕಾರ ಸಂಘಗಳ ಕಾಯ್ದೆ ನಿಯಮ ಮತ್ತು ಸಂಘದ ಬೈಲಾ ವಿರುದ್ಧ ಕಾರ್ಯನಿರ್ವಹಿಸುತ್ತಿರುವ ಕಾರಣ ಕಾನೂನು ನಿಯಮ ಉಲ್ಲಂಘನೆ, ಕರ್ತವ್ಯ ಲೋಪ, ಬೇಜವಾಬ್ದಾರಿತನದಿಂದ ಕೂಡಿರುವ ಪ್ರಯುಕ್ತ ಆಡಳಿತ ಮಂಡಳಿಯನ್ನು ಕಾಯ್ದೆ ಕಲಂ 30 ರ ರೀತ್ಯಾ ರದ್ದುಪಡಿಸಿ ಆಡಳಿತಾಧಿಕಾರಿಯನ್ನು ನೇಮಕಾತಿ ಮಾಡುವಂತೆ ಉಲ್ಲೇಖ (1) ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರುರವರು ಮಾಡಲಾಗಿರುವ ಶಿಫಾರಸ್ಸಿನಂತೆ, ಉಲ್ಲೇಖ(2) ರ ಈ ಕಛೇರಿಯ ಕಾರಣ ಕೇಳಿ ನೋಟೀಸನ್ನು ಸಂಘದ ಚುನಾಯಿತ ಎಂಟು ಜನ ಆಡಳಿತ ಮಂಡಳಿ ನಿರ್ದೇಶಕರಿಗೆ ನೀಡಲಾಗಿದ್ದು, ಈ ನೋಟೀಸಿನಲ್ಲಿ ಆಡಳಿತ ಮಂಡಳಿಯು ಸಹಕಾರ ಸಂಘಗಳ ಕಾಯ್ದೆ, ನಿಯಮ ನಿಬಂಧಕರ ಸುತ್ತೋಲೆಗಳು, ಸರ್ಕಾರದ ಅಧಿಸೂಚನೆಗಳು ಮತ್ತು ಸಂಘದ ಉಪನಿಯಮಗಳನ್ನು ಉಲ್ಲಂಘನೆ ಮಾಡುತ್ತಿರುವ ಬಗ್ಗೆ ಹಾಗೂ ಆಡಳಿತ ಮಂಡಳಿಯ ಮೇಲೆ ಕಾನೂನು ಪ್ರಕಾರ ಹೊರಿಸಲಾಗಿರುವ ಕರ್ತವ್ಯಗಳು ಮತ್ತು ಜವಾಬ್ದಾರಿ ನಿರ್ವಹಣೆಯಲ್ಲಿ ತಾತ್ಸಾರ ಮತ್ತು ಬೇಜವಾಬ್ದಾರಿತನವನ್ನು ತೋರಿ ಕಾನೂನು ಬಾಹಿರ ತೀರ್ಮಾನಗಳನ್ನು ತೆಗೆದುಕೊಂಡು ಸಂಘಕ್ಕೆ ಆರ್ಥಿಕವಾಗಿ ನಷ್ಟ ಉಂಟಾಗಲು ಕಾರಣರಾಗಿದ್ದು ಹಾಗೂ ಬೇಜವಾಬ್ದಾರಿ ನಿರ್ಣಯಗಳಿಂದ ಸದಸ್ಯರ ಹಿತದೃಷ್ಟಿಯನ್ನು ಕಾಪಾಡಲು ವಿಫಲರಾಗಿರುವ ಕಾರಣ ಈ ಕೆಳಕಂಡ 15 ಆರೋಪಗಳ ಕಾರಣದಿಂದಾಗಿ ಆಡಳಿತ ಮಂಡಳಿಯನ್ನು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 30(1) ರನ್ವಯ ಏಕೆ ರದ್ದುಪಡಿಸಬಾರದೆಂಬುದಕ್ಕೆ ಕಾರಣ ಕೇಳಿ ನೋಟೀಸು ತಲುಪಿದ 10 ದಿನಗಳೊಳಗಾಗಿ ಲಿಖಿತವಾಗಿ ಸಮಜಾಯಿಷಿಕೆಯನ್ನು ಸಲ್ಲಿಸಲು ನೋಟೀಸು ನೀಡಲಾಗಿತ್ತು.

**ಆರೋಪ:1**

ಬ್ಯಾಂಕಿನ ವ್ಯವಸ್ಥಾಪಕರಾದ ಶ್ರೀ ಸಿದ್ದವೀರಯ್ಯರವರನ್ನು ದಿನಾಂಕ:31.3.2006 ರಿಂದ ಜಾರಿಗೆ ಬರುವಂತೆ ಆಡಳಿತ ಮಂಡಳಿಯು ನಿವೃತ್ತಿಗೊಳಿಸಲು ತೀರ್ಮಾನಿಸಿದ್ದು, ಬ್ಯಾಂಕಿನ ಹಿತದೃಷ್ಟಿಯಿಂದ ಸಾಮಾನ್ಯ ಪದವೃಂದ, ಸಮಿತಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ, ತುಮಕೂರು ರವರು ಆದೇಶ ಸಂಖ್ಯೆ: ಡಿಸಿಸಿಬಿ/ಸಿಸಿಸಿ/ಶಿಕಾ/6255/2006-07 ದಿನಾಂಕ:22.11.2006 ರಲ್ಲಿ ವ್ಯವಸ್ಥಾಪಕರ ಹುದ್ದೆಗೆ ಪ್ರಭಾರ ವ್ಯವಸ್ಥಾಪಕರಾಗಿ ಶ್ರೀ ನಾರಾಯಣಪ್ಪರವರನ್ನು ನಿಯೋಜಿಸಲಾಗಿ ಸದರಿಯವರಿಗೆ ವ್ಯವಸ್ಥಾಪಕರ ಪ್ರಭಾರವನ್ನು ವಹಿಸಿಕೊಡದೆ, ಹಣಕಾಸು ನೆರವು ನೀಡಿದ ಬ್ಯಾಂಕ್ ಆದೇಶವನ್ನು ಉಲ್ಲಂಘಿಸಿ ಸಹಕಾರ ಸಂಘಗಳ ಕಾಯಿದೆ ಕಲಂ 28 ಎ (1)ರಂತೆ ಕ್ರಮವಿಡದೆ ಆಡಳಿತ ಮಂಡಳಿಯು ಬೇಜವಾಬ್ದಾರಿತನದಿಂದ ವರ್ತಿಸಿರುವುದು.

**ಆರೋಪ:2**

ಸಹಕಾರ ಸಂಘಗಳ ಕಾಯಿದೆ 1960ರ ನಿಯಮಾವಳಿಗಳ ನಿಯಮ 17 (2)(ಎ) ರಲ್ಲಿ ನಿಗಧಿಪಡಿಸಲಾದ ವಿದ್ಯಾರ್ಹತೆ ಇಲ್ಲದಿದ್ದರು ಅನರ್ಹ ನೌಕರನಾದ ಶ್ರೀ ಸಿ. ರಂಗಪ್ಪನವರಿಗೆ ಸಂಘದ ವ್ಯವಸ್ಥಾಪಕರನ್ನಾಗಿ ಮಾಡಲು ದಿನಾಂಕ:7.12.2006 ರಂದು ಆಡಳಿತ ಮಂಡಳಿಯು ಕಾನೂನು ಬಾಹಿರ ತೀರ್ಮಾನ ಕೈಗೊಂಡಿರುತ್ತದೆ.

**ಆರೋಪ:3**

ಬ್ಯಾಂಕಿನ ವ್ಯವಸ್ಥಾಪಕರ ಹುದ್ದೆಗೆ ಹಣಕಾಸು ನೆರವು ನೀಡಿದ ಬ್ಯಾಂಕಿನಿಂದ ನಿವೃತ್ತಿ ಹೊಂದಿ ಖಾಲಿಯಾದ ವ್ಯವಸ್ಥಾಪಕರ ಹುದ್ದೆಗೆ ಬದಲಿ ವ್ಯವಸ್ಥೆ ಮಾಡಲಾಗಿದ್ದರು, ಅವರಿಗೆ ಪ್ರಭಾರ ಕೊಡದೆ ಸಹಕಾರ ಸಂಘಗಳ ಕಾಯಿದೆ 1959 ಕಲಂ 29ಜಿ ರಂತೆ ಸಂಘದ ವ್ಯವಹಾರಗಳನ್ನು ನಿರ್ವಹಿಸಬೇಕಾದ ಕಾರ್ಯಗಳನ್ನು ನಡೆಸಲು ಅನುವು ಮಾಡಿಕೊಡದೆ ಅಡ್ಡಿಪಡಿಸಿ ಡಿಸೆಂಬರ್ 2006 ರಿಂದ ಈವರೆವಿಗೂ ಪಡಿತರ ಆಹಾರವನ್ನು ಎತ್ತುವಳಿ ಮಾಡಿ ಸಂಘದ ಪಡಿತರ ಚೀಟಿದಾರರಿಗೆ ಹಂಚಲು ವ್ಯವಸ್ಥೆ ಮಾಡುವಲ್ಲಿ ವಿಫಲರಾಗಲು ಆಡಳಿತ ಮಂಡಳಿಯು ಕಾರಣ ಕರ್ತವಾಗಿದೆ.

**ಆರೋಪ-4**

ಸಹಕಾರ ಸಂಘಗಳ ಉಪನಿಬಂಧಕರ ಆದೇಶ ಸಂಖ್ಯೆ ಡಿಆರ್‌ಟಿ/ ಸಿಆರ್‌ಡಿ/ಸಿಸಿಸಿ/ಸಿಆರ್-199/2003-04 ದಿನಾಂಕ:12-2-2004ರಲ್ಲಿ ಒಂದು ಲೆಕ್ಕಣಿಗ ಮತ್ತು ಒಂದು ಸಹಾಯಕ ಹುದ್ದೆಗೆ ವೃಂದ ಬಲ ಮತ್ತು ವೇತನ ಶ್ರೇಣಿಯನ್ನು ಸಂಘವು ಮಂಜೂರಾತಿ ಆದೇಶವನ್ನು ಪಡೆದಿರುತ್ತದೆ. ಈ ಆದೇಶ ಹಾಗೂ ಸಹಕಾರಿ ಕಾನೂನನ್ವಯ ಹೊಸ ಹುದ್ದೆಗೆ ನೇಮಕಾತಿ ಮಾಡುವಲ್ಲಿ ನಿಯಮಗಳನ್ನು ಪಾಲಿಸದೆ ಶ್ರೀ ಎಂ.ಎಲ್ .ಕುಮಾರ ಸ್ವಾಮಿರವರನ್ನು ಲೆಕ್ಕಿಗ ಹುದ್ದೆಗೆ ನೇಮಕಾತಿ ಮಾಡಿಕೊಳ್ಳಲಾಗಿದೆ. ಹಾಗೂ ನಿಯಮ 17ರ ಅವಕಾಶದಂತೆ ಶ್ರೀ ಎಂ.ಎಲ್ ಕುಮಾರ ಸ್ವಾಮಿರವರು ವ್ಯವಸ್ಥಾಪಕರ ಹುದ್ದೆಗೆ ಅನರ್ಹರಾಗಿದ್ದರು, ಇವರನ್ನು ವ್ಯವಸ್ಥಾಪಕರನ್ನಾಗಿ ಮಾಡಲು ದಿ:17.2.2007 ರಲ್ಲಿ ಆಡಳಿತ ಮಂಡಳಿಯು ಕಾನೂನು ಬಾಹಿರ ತೀರ್ಮಾನ ಕೈಗೊಂಡಿರುತ್ತಾರೆ.

**ಆರೋಪ-5**

ಬ್ಯಾಂಕಿನ ಮಾಜಿ ವ್ಯವಸ್ಥಾಪಕರಾದ ಶ್ರೀ ಎಂ.ಸಿ.ಸಿದ್ದವೀರಯ್ಯರವರನ್ನು ನಿವೃತ್ತಿಗೊಳಿಸಲು ದಿ:29.3.2006ರಲ್ಲಿ ತೀರ್ಮಾನ ಕೈಗೊಂಡಿದ್ದು ಈ ತೀರ್ಮಾನದಲ್ಲಿ ಶ್ರೀ ಎಂ.ಸಿ. ಸಿದ್ದವೀರಯ್ಯನವರಿಗೆ ಸಹಕಾರ ಸಂಘಗಳ ನಿಯಮ 18(3) ರಂತೆ 8 ತಿಂಗಳ ರಜೆ ಹಾಗೂ ನಿಯಮ 18(4) ರಂತೆ 15 ತಿಂಗಳ ಗ್ರಾಜ್ಯುಟಿ ಹಣವನ್ನು ಮತ್ತು ಇವರ ಪ್ರಾವಿಡೆಂಟ್ ಫಂಡ್ ಹಾಗೂ ಸೆಕ್ಯೂರಿಟಿ ಡೆಪಾಸಿಟ್ ಹಣವನ್ನು ವಾಪಸ್ಸು ಮಾಡಲು ಸರ್ವಾನುಮತದಿಂದ ತೀರ್ಮಾನ ಕೈಗೊಂಡಿರುತ್ತಾರೆ. ಆದರೆ ಸಹಕಾರ ಸಂಘಗಳ 1960ರ ನಿಯಮಾವಳಿಗಳ ನಿಯಮ 18(3)(5)ರ ಅವಕಾಶದಂತೆ ಒಬ್ಬ ನೌಕರನಿಗೆ ನಿವೃತ್ತಿ ಹೊಂದುವ ಮುನ್ನ 4 ತಿಂಗಳ ಹಕ್ಕಿನ ರಜೆಯನ್ನು ಅವರ ಲೆಕ್ಕದಲ್ಲಿ ರಜೆಯಿದ್ದಲ್ಲಿ ಮಾತ್ರ ಅಭ್ಯರ್ಪಿಸಿ ನಗದೀಕರಿಸಿಕೊಳ್ಳಲು ಅವಕಾಶವಿರುತ್ತದೆ. ಈ ಅವಕಾಶದಂತೆ, ಕ್ರಮವಿಡದೆ ಅವರ ಲೆಕ್ಕದಲ್ಲಿ ರಜೆಯಿರುವ ಬಗ್ಗೆ ಖಾತರಿ ಪಡಿಸಿಕೊಳ್ಳದೆ ರಜೆ ಮಂಜೂರು ಮಾಡಿರುವುದಲ್ಲದೆ 4 ತಿಂಗಳ ಬದಲಾಗಿ 8 ತಿಂಗಳ ರಜೆ ಸಂಬಳವನ್ನು ನೀಡಿ ಸಂಘಕ್ಕ ಆರ್ಥಿಕವಾಗಿ ನಷ್ಟವಾಗಲು ಆಡಳಿತ ಮಂಡಳಿಯು ಕಾರಣವಾಗಿರುತ್ತದೆ.

**ಆರೋಪ-6**

ಸಹಕಾರ ಸಂಘಗಳ 1960ರ ನಿಯಮಾವಳಿ ನಿಯಮ 18(5)ರ ಅವಕಾಶದಂತೆ ಸಂಘದ ಎಲ್ಲಾ ನೌಕರರಿಗೆ ಖಡ್ಡಾಯವಾಗಿ ಸೇವಾ ಪುಸ್ತಕವನ್ನು ನಿರ್ವಹಿಸಿ ಅವರ ಸೇವೆಗೆ ಸಂಬಂಧಿಸಿದಂತೆ ಎಲ್ಲಾ ಮಾಹಿತಿಗಳನ್ನು ನಮೂದು ಮಾಡಬೇಕಾಗಿದ್ದು, ಸಂಘದ ವ್ಯವಸ್ಥಾಪಕರಿಗೆ ಸಂಬಂಧಿಸಿದಂತೆ, ಸೇವಾ ಪುಸ್ತಕದಲ್ಲಿ ನಮೂದಾದ ಎಲ್ಲಾ ಆಗು ಹೋಗುಗಳ ಬಗ್ಗೆ ಬ್ಯಾಂಕಿನ ಅಧ್ಯಕ್ಷರು ಸಹಿ ಮಾಡಬೇಕಾಗಿರುತ್ತದೆ. ಆದರೆ ಈ ರೀತಿ ಮಾಡದೆ ಶ್ರೀ ಎಂ. ಸಿ. ಸಿದ್ದವೀರಯ್ಯರವರಿಗೆ ಸಂಬಂಧಿಸಿದಂತೆ, ಸೇವಾ ಪುಸ್ತಕವನ್ನು ನಿರ್ವಹಿಸದೆ ಇದ್ದರು ಅವರು ಸಂಘದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿದ್ದಾರೆ, ಅವರ ಖಾತೆಯಲ್ಲಿ ಎಷ್ಟು ರಜೆಗಳಿವೆ ಎಂಬ ಬಗ್ಗೆ ಖಾತರಿ ಪಡಿಸಿಕೊಳ್ಳದೆ ಇವರಿಗೆ ನಿಯಮ 18(4)(ಸಿ) ರ ಅವಕಾಶದಂತೆ, ಗ್ರಾಜ್ಯುಟಿಯನ್ನು ಪಾವತಿಸದೆ 15 ತಿಂಗಳ ಗ್ರಾಜ್ಯುಟಿಯನ್ನು ಕಾನೂನು ಬಾಹಿರವಾಗಿ ಪಾವತಿಸಿ ಸಂಘಕ್ಕೆ ಆರ್ಥಿಕವಾಗಿ ನಷ್ಟ ಹೊಂದಲು ಆಡಳಿತ ಮಂಡಳಿಯು ಕಾರಣ ಕರ್ತವಾಗಿದೆ.

**ಆರೋಪ-7**

ದಿನಾಂಕ:29.3.2006 ಆಡಳಿತ ಮಂಡಳಿ ತೀರ್ಮಾನದಂತೆ ಸಂಘದ ವ್ಯವಸ್ಥಾಪಕರಾದ ಶ್ರೀ ಎಂ.ಸಿ. ಸಿದ್ದವೀರಯ್ಯನವರನ್ನು ವಯೋನಿವೃತ್ತಿಗೊಳಿಸಲು ತೀರ್ಮಾನಿಸಲಾಗಿದೆ ಆದರೆ ಇವರನ್ನು ದಿನಾಂಕ:9.10.2006 ರ ವರೆಗೆ ಅನಧಿಕೃತವಾಗಿ ಹಾಗೂ ಕಾನೂನು ಬಾಹಿರವಾಗಿ ಸಹಕಾರ ಸಂಘಗಳ ಕಾಯಿದೆ 18(ಎ)(2) ಉಲ್ಲಂಘನೆ ಮಾಡಿ ಸಂಘದ ವ್ಯವಸ್ಥಾಪಕರಾಗಿ ಮುಂದುವರೆಸಿರುತ್ತಾರೆ. ಈ ಅವಧಿಯಲ್ಲಿ ಶ್ರೀ ಎಂ.ಸಿ. ಸಿದ್ದವೀರಯ್ಯನವರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ತುಮಕೂರಿನಿಂದ ಮಂಜೂರಾದ ಎಸ್.ಟಿ.ಕೆ, ಕೆ.ಸಿ.ಸಿ. ಸಾಲ ಮಂಜೂರಾತಿ ಮೊತ್ತವನ್ನು ಈ ಕೆಳಕಂಡಂತೆ ಬ್ಯಾಂಕಿನಿಂದ ಡ್ರಾ ಮಾಡಿರುತ್ತಾರೆ.

ದಿ: 3-7-2006 ರೂ. 17,34,000/-
ದಿ: 24-7-2006 ರೂ. 16,16,000/-
ದಿ: 9-7-2006 ರೂ. 6,70,000/-

ಆದರೆ ದಿ:3.7.2006 ರಲ್ಲಿ ಜಿಲ್ಲಾ ಬ್ಯಾಂಕಿನಿಂದ ರೂ. 17.34 ಲಕ್ಷ ಮಾತ್ರ ಮಂಜೂರಾಗಿದ್ದರು, ಫಲಾನುಭವಿಗಳಿಗೆ ಬಿಡುಗಡೆ ಮಾಡಲಾದ ದಾಖಲಾತಿಗಳನ್ನು ಮತ್ತು ನಗದು ಪುಸ್ತಕವನ್ನು ಪರಿಶೀಲಿಸಲಾಗಿ ರೂ. 17.64 ಲಕ್ಷ ಬಟವಾಡೆ ಮಾಡಲಾಗಿದೆ. ಜಿಲ್ಲಾ ಬ್ಯಾಂಕಿನಿಂದ ಮಂಜೂರಾದ ಮೊತ್ತಕ್ಕಿಂತ ರೂ. 30, 000 ಹೆಚ್ಚಿಗೆ ಬಟವಾಡೆ ಮಾಡಿರುವುದಕ್ಕೆ ಆಡಳಿತ ಮಂಡಳಿಯ ನಿರ್ಣಯವಿರುವುದಿಲ್ಲ. ಬೈಲಾ 56 (3) ಮತ್ತು 59 ಸಂಪೂರ್ಣ ಉಲ್ಲಂಘನೆಯಾಗಿರುತ್ತದೆ. ಹಾಗೂ ದಿ:8.9.2006 ರಂದು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನಿಂದ ಕೆ.ಸಿ.ಸಿ. ಕ್ರೆಡಿಟ್ ಸಾಲ ಮಂಜೂರಾಗಿದ್ದು ಆದೇಶ ಸಂಖ್ಯೆ: ಕೆ.ಸಿ.ಸಿ. ಕ್ರೆಡಿಟ್ 3949/ದಿ:6.9.2006 ರಲ್ಲಿ 18 ಜನಕ್ಕೆ ರೂ. 6.70 ಲಕ್ಷ ಮಂಜೂರು ಮಾಡಿ ದಿ:9.9.2006 ರಂದು ಸಂಘದ ಉಳಿತಾಯ ಖಾತೆಗೆ ವರ್ಗಾವಣೆ ಮಾಡಲಾಗಿದೆ. ಆದರೆ ದಿ:8-9-2006 ರಂದೆ ಸಾಲಗಾರರಿಗೆ ಸಾಲದ ಮೊತ್ತವನ್ನು ಬಟವಾಡೆ ಮಾಡಿ ದಿ:8-9-2006 ರಂದಿನ ನಗದು ಪುಸ್ತಕದಲ್ಲಿ ಕಾನೂನು ಬಾಹಿರವಾಗಿ ದಾಖಲು ಮಾಡಿರುವುದು ಕಂಡು ಬಂದಿದೆ. ಜಿಲ್ಲಾ ಬ್ಯಾಂಕಿನಿಂದ ದಿ:8.9.2006 ರಂದು ಮಂಜೂರಾಗಿದ್ದರು ಒಂದು ದಿನ ಮುಂಚಿತವಾಗಿ ಹಣ ಬಟವಾಡೆ ಮಾಡಿರುವುದು ಆಡಳಿತ ಮಂಡಳಿಯು ತನ್ನ ನೌಕರರ ಮೇಲಿನ ಹತೋಟಿ ಇಲ್ಲದೆ ನಡೆಸಲಾಗುತ್ತಿರುವ ಅವ್ಯವಹಾರಕ್ಕೆ ಹಾಗೂ ಜಿಲ್ಲಾ ಬ್ಯಾಂಕಿನಿಂದ ಹಣ ಡ್ರಾ ಮಾಡುವಲ್ಲಿ ಸಂಘದ ಅಧ್ಯಕ್ಷರು ಮತ್ತು ಅನಧಿಕೃತವಾಗಿ ವ್ಯವಸ್ಥಾಪಕರಾಗಿ ಮುಂದುವರೆಸಲಾದ ಶ್ರೀ ಎಂ.ಸಿ. ಸಿದ್ದವೀರಯ್ಯರವರುಗಳಿಂದ ನಡೆದಿದೆಯಾದ ಅವ್ಯವಹಾರಕ್ಕೆ ಆಡಳಿತ ಮಂಡಳಿಯು ಸಂಪೂರ್ಣ ಜವಾಬ್ದಾರಿಯಾಗಿರುತ್ತದೆ.

**ಆರೋಪ-8**

ಆರೋಪ 7ರಲ್ಲಿ ತಿಳಿಸಿದಂತೆ, ದಿ:9.9.2006ರಲ್ಲಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಂದ ಮಂಜೂರಾದ ಎಸ್.ಟಿ.ಕೆ ಕೆ.ಸಿ.ಸಿ ಸಾಲ ರೂ. 6.70 ರ ಪೈಕಿ ಕೇವಲ 6.48 ಲಕ್ಷ ಮಾತ್ರ ಬಿಡುಗಡೆಯಾಗಿದ್ದು 0.32 ಲಕ್ಷ ಹಣ ಸಾಲಗಾರರಿಗೆ ಬಿಡುಗಡೆಯಾದ ಬಗ್ಗೆ ದಾಖಲೆ ಇರುವುದಿಲ್ಲ.

**ಆರೋಪ-9**

ಸಂಘಕ್ಕೆ ಹೊಸದಾಗಿ ಸದಸ್ಯರನ್ನು ನೊಂದಣಿ ಮಾಡಿಕೊಳ್ಳುವ ನಿಮಿತ್ತ ಅಂತಹ ವ್ಯಕ್ತಿಗಳಿಂದ ಸದಸ್ಯತ್ವದ ಅರ್ಜಿ ಸ್ವೀಕರಿಸದೆ ಆಡಳಿತ ಮಂಡಳಿ ಪರಿಶೀಲಿಸಿ, ಸದಸ್ಯತ್ವದ ಬಗ್ಗೆ ಕ್ರಮವಿಡದೇ ಇರುವುದು.

ಸಂಘದ ಬೈಲಾ 11 ರ ರೀತ್ಯಾ ಸಂಘದ ಸದಸ್ಯತ್ವ ಕೋರಿ ಷೇರು ಅರ್ಜಿಯನ್ನು ಲಿಖಿತ ಮೂಲಕ ಬ್ಯಾಂಕಿನ ಕಾರ್ಯದರ್ಶಿಗಳಿಗೆ ಸಲ್ಲಿಸಬೇಕಾಗಿರುತ್ತದೆ. ಮತ್ತು ಅಂತಹ ಅರ್ಜಿಗಳನ್ನು ನಿರ್ದೇಶಕ ಮಂಡಳಿಯು 3 ತಿಂಗಳೊಳಗಾಗಿ ವಿಲೇವಾರಿ ಮಾಡತಕ್ಕದ್ದಾಗಿರುತ್ತದೆ. ಈ ರೀತಿ ಕ್ರಮವಿಡುವುದು ಸಂಘದ ಬೈಲ 56(1)ರ ಪ್ರಕಾರ ನಿರ್ದೇಶಕ ಮಂಡಳಿಯ ಕರ್ತವ್ಯವಾಗಿರುತ್ತದೆ. ಆದರೆ ಸಂಘದ ನಿರ್ದೇಶಕ ಮಂಡಳಿಯು ಈ ಕೆಳಕಂಡ ಪ್ರಕರಣಗಳ ಬಗ್ಗೆ ಮೇಲೆ ವಿವರಿಸಿರುವಂತೆ ಕ್ರಮ ಇಟ್ಟಿರುವುದಿಲ್ಲ.

| ಕ್ರ.ಸಂ | ಹೆಸರು | ರಸೀತಿ ಸಂ. | ದಿನಾಂಕ |
|---|---|---|---|
| 1 | ಮುದ್ದಯ್ಯ | 401 | 13–7–2006 |
| 2 | ತಾಯಮ್ಮ | 358 | 5–7–2006 |
| 3 | ದೊಡ್ಡಮುದ್ದಯ್ಯ | 359 | 5–7–2006 |
| 4 | ಈರಮ್ಮ ಕೋಂ ಹುಲಿರಾಮಯ್ಯ | 370 | 7–7–2006 |

ಪ್ರಯುಕ್ತ ಆಡಳಿತ ಮಂಡಳಿಯವರು ಬೈಲಾ ನಂ 11 ಮತ್ತು 56 (1) ರ ರೀತ್ಯಾ ಕ್ರಮವಿಡದೇ ಬೈಲಾಗಳನ್ನು ಉಲ್ಲಂಘನೆ ಮಾಡಿರುತ್ತಾರೆ.

**ಆರೋಪ–10**

ದಿನಾಂಕ:7.12.2006 ರಂದು ಸಂಘದ ಆಡಳಿತ ಮಂಡಳಿ ಸಭೆ ನಡೆಸಿ ಅತ್ಯಂತ ಮಹತ್ವದ ವಿಷಯಗಳ ಬಗ್ಗೆ ಅಂದರೆ ವ್ಯವಸ್ಥಾಪಕರ ನೇಮಕಾತಿ ಮತ್ತು ಜಿಲ್ಲಾ ಬ್ಯಾಂಕಿನಿಂದ ಕೆ.ಸಿ.ಸಿ. ಸಾಲ ಮಂಜೂರು ಮಾಡುವಂತಹ ಅತೀ ಮಹತ್ವದ ತೀರ್ಮಾನವನ್ನು ತೆಗೆದುಕೊಂಡಿರುತ್ತಾರೆ.ಸದರಿ ಸಭೆಗೆ ಅಧ್ಯಕ್ಷರಾದ ಶ್ರೀ ಎಂ.ಹೆಚ್.ಶಿವಣ್ಣ, ನಿರ್ದೇಶಕರಾದ ಪುಟ್ಟಯ್ಯ, ಶಿವಲಿಂಗಯ್ಯ, ಗಂಗಯ್ಯ ಈ ನಾಲ್ಕು ಜನ ಮಾತ್ರ ಹಾಜರಿರುತ್ತಾರೆ. ಸಂಘದ ಬೈಲಾ 28(5)ರ ಪ್ರಕಾರ ಒಂದು ನಿರ್ದೇಶಕ ಮಂಡಳಿ ಸಭೆಯ ಅವಶ್ಯಕ ಕೋರಂ 5 ಇರತಕ್ಕದ್ದಾಗಿರುತ್ತದೆ. ಸದರಿ 7–12–2006 ರಂದು ನಡೆಸಿದ ಸಭೆಯಲ್ಲಿ ಕೇವಲ 4 ಜನ ಮಾತ್ರ ಸಹಿ ಹಾಕಿದ್ದು, ಸದರಿ ಸಭೆಗೆ ಕೋರಂ ಇರುವುದಿಲ್ಲ. ಇದು ಬೈಲಾ 48(5) ರ ಉಲ್ಲಂಘನೆಯಾಗಿರುತ್ತದೆ. ಮತ್ತು ಸದರಿ ಸಭೆಯ ತೀರ್ಮಾನದ ಆಧಾರದ ಮೇರೆಗೆ ಸಂಘದಿಂದ 33 ಜನರಿಗೆ ರೂ. 18.50 ಲಕ್ಷ ಸಾಲ ಮಂಜೂರು ಮಾಡಿದ್ದು, ಇವುಗಳನ್ನು ಶಿಫಾರಸ್ಸು ಮಾಡಲಾಗಿರುತ್ತದೆ.

**ಆರೋಪ–11**

ದಿನಾಂಕ: 7.12.2006 ರಂದು ಆಡಳಿತ ಮಂಡಳಿ ಸಭೆಯಲ್ಲಿ ಸಂಘದ ವತಿಯಿಂದ ಸದಸ್ಯರಿಗೆ 33 ಜನರಿಗೆ ರೂ. 18.50 ಲಕ್ಷ ಕೆ.ಸಿ.ಸಿ. ಸಾಲ ಮಂಜೂರು ಮಾಡಿ ತೀರ್ಮಾನಿಸಿರುತ್ತಾರೆ. ಸಂಘದ ಬೈಲಾ 11 ಸಾಲ ಮತ್ತು ಮುಂಗಡಗಳು ಪುಟ 41ರ ಸಾಲದ ಪರಿಮಿತಿಯ ರೀತ್ಯಾ ಸಂಘದ ಪ್ರತಿ ಸದಸ್ಯನ ಒಟ್ಟು ಸಾಲವು ಉತ್ಪತ್ತಿ ಈಡಿನ ಸಾಲ, ಚಿನ್ನಾಭರಣ ಈಡಿನ ಸಾಲ ಹಾಗೂ ಬಾಡಿಗೆ ಖರೀದಿಯನ್ವಯ ಪಡೆದ ಸಾಲಗಳನ್ನು ಹೊರತು ಪಡಿಸಿ ಒಟ್ಟು ರೂ.1.00 ಲಕ್ಷಕ್ಕೆ ಮೀರಿರಕೂಡದು" ಆದರೆ ಈ ಕೆಳಕಂಡ ಪ್ರಕರಣಗಳಲ್ಲಿ ರೂ.1.00 ಲಕ್ಷ ಮೀರಿ ಸಂಘದ ವತಿಯಿಂದ ಸಾಲ ಮಂಜೂರು ಮಾಡಿರುತ್ತಾರೆ.

| ಕ್ರ. ಸಂ | ಸಾಲಗಾರರ ಹೆಸರು | ದಿ:7–12–2006 ಬಾಕಿ | 7–12–2006ಕ್ಕೆ ಸಾಲ ಮಂಜೂರಾತಿ | ಒಟ್ಟು |
|---|---|---|---|---|
| 1 | ಶ್ರೀ ಎಲ್. ರಾಜಣ್ಣ, ಎಲ್.ಎಫ್ 18 | 15,000–00 | 1,00,000–00 | 1,15,000–00 |
| 2 | ಶ್ರೀ ನಂಜಪ್ಪ ಎಲ್.ಎಫ್. 14 | 40.000–00 | 1,00,000–00 | 1,40,000–00 |
| 3 | ಶ್ರೀ ಲಕ್ಷ್ಮಯ್ಯ, ಎಲ್.ಎಫ್ 109 | 60,000–00 | 60,000–00 | 1,20,000–00 |

**ಆರೋಪ–12**

ಸಂಘದ ಸುಸ್ತಿದಾರ ಸದಸ್ಯರಿಗೆ ಸಂಘದಿಂದ ಸಾಲ ಮಂಜೂರು ಮಾಡಿರುವುದು,

ಜಿಲ್ಲಾ ಬ್ಯಾಂಕು ಕೆ.ಸಿ.ಸಿ. ಸಾಲ ಬಿಡುಗಡೆ ಆದೇಶ ದಿನಾಂಕ:6.12.2005ರ ರೀತ್ಯಾ ಈ ಕೆಳಕಂಡವರು ದಿನಾಂಕ:8.12.2005 ರಂದು ಕೆ.ಸಿ.ಸಿ. ಸಾಲ ಪಡೆದಿದ್ದು, ಮರುಪಾವತಿ ಮಾಡುವ ಅವಧಿ 7–12–2005 ಆಗಿರುತ್ತದೆ. ಈ ಕೆಳಕಂಡ ಪ್ರಕರಣಗಳಲ್ಲಿ ದಿನಾಂಕ:7.12.2006 ರಂದು ಆಡಳಿತ ಮಂಡಳಿಯವರು ಸಾಲ ಮಂಜೂರಾತಿ ಮಾಡಿರುತ್ತಾರೆ.

1) ಎಲ್. ರಾಜಣ್ಣ, ರೂ. 75,000–00 2) ಎಸ್. ಗಂಗಯ್ಯ ರೂ 35, 000–00 3) ನಂಜಪ್ಪ ರೂ, 40,000–00 4) ಅಬ್ದುಲ್ ಸತ್ತಾರ್ ರೂ. 50,000/– 5) ಸಿ.ವಿ. ಕಾಂತರಾಜು ರೂ., 50,000 6) ಎಂ.ಸಿ. ಸಿದ್ದಪ್ಪ, ರೂ. 50.000/–7) ನರಸಿಂಹಯ್ಯ ರೂ. 50,000/ 8) ಲಕ್ಷ್ಮಮ್ಮ ರೂ. 45,000–00 9) ಮುಖಬುಲ್ ಉನ್ನೀಸ ರೂ. 45,000/– 10) ಶಾರದಮ್ಮ ಕೋಂ ಬಿ.ಆರ್. ಸಿದ್ದನಂಜಯ್ಯ ರೂ. 50,000/ 11) ಲಕ್ಷ್ಮಯ್ಯ ರೂ. 60,000/–

ಮೇಲ್ಕಂಡ ಪ್ರಕರಣಗಳಲ್ಲಿ ಅವರುಗಳು ದಿ:8.12.2005 ರಂದು ಪಡೆದ ಕೆ.ಸಿ.ಸಿ. ಸಾಲ ದಿ:7.12.2006ರಂದು ಸುಸ್ತಿಯಾಗಿರುತ್ತದೆ. ಮೇಲೆ ವಿವರಿಸಿರುವ ವ್ಯಕ್ತಿಗಳು ದಿ:7.12.2006ಕ್ಕೆ ಸುಸ್ತಿದಾರರಾಗಿದ್ದರೂ ಸಹಿತ ಸದರಿಯವರ ದಿ:7–12–2006 ರ ಆಡಳಿತ ಸಮಿತಿ ಸಭೆಯ ರೀತ್ಯಾ ಸುಸ್ತಿದಾರಿಗೆ ಸಾಲ ಮಂಜೂರಾತಿಯನ್ನು ಮಾಡಲಾಗಿದೆ. ಸದರಿ ಸಾಲಗಾರರು ಈ ತಹಲ್ ವರೆವಿಗೂ ಸಹ ಸುಸ್ತಿದಾರರಾಗಿರುತ್ತಾರೆ. ಈ ರೀತಿ ಸುಸ್ತಿದಾರರಾದವರಿಗೆ ಸಾಲ ಮರು ಪಾವತಿ

ಮಾಡದೇ ಇದ್ದರೂ ಸಹಿತ ಸಾಲ ಮಂಜೂರಾತಿ ಮಾಡಿರುವುದು ಕಾನೂನು ಬಾಹಿರ, ಸ್ವಜನ ಪಕ್ಷಪಾತ ಮತ್ತು ಅಧಿಕಾರ ದುರುಪಯೋಗವಾಗಿರುತ್ತದೆ.

**ಆರೋಪ–13**

ಸಂಘದ 2005–06ನೇ ಸಾಲಿನ ಆಡಿಟ್ ವರದಿಯ ರೀತ್ಯಾ ರೂ. 1,60,097–03 ಅಪದ್ದನ ಹೊಂದಿದ್ದು ಈ ಪೈಕಿ ರೂ. 76,318–00 ಗಳನ್ನು ಮಾತ್ರ ಜಿಲ್ಲಾ ಬ್ಯಾಂಕ್‌ನಲ್ಲಿ ಅಲಾಯಿದ ಠೇವಣಿ ಮಾಡಲಾಗಿದೆ. ಉಳಿಕೆ ಮೊತ್ತ ಅಲಾಯಿಸಿದ ಠೇವಣಿ ಮಾಡಿರುವುದಿಲ್ಲ. ಈ ಕ್ರಮವು ಸಹಕಾರಿ ಕಾಯಿದೆ ಕಲಂ 58 ರ ಮತ್ತು ನಿಯಮ 23ರ ಉಲ್ಲಂಘನೆಯಾಗಿರುತ್ತದೆ.

**ಆರೋಪ–14**

ಸಂಘದ 2005–06ನೇ ಸಾಲಿನ ಆಡಿಟ್ ವರದಿಯ ರೀತ್ಯಾ ಸಂಘವು, ಸಂಘದ ಭವಿಷ್ಯ ನಿಧಿ ವಂತಿಗೆ ಮತ್ತು ಸಿಬ್ಬಂದಿ ವಂತಿಗೆ ಸೇರಿ ಒಟ್ಟು ರೂ,. 1,46,312–80 ಸಿಬ್ಬಂದಿ ಭವಿಷ್ಯ ನಿಧಿ ಹೊಂದಿದ್ದು ಸದರಿ ಭವಿಷ್ಯ ನಿಧಿಯನ್ನು ಅಲಾಯಿದ ಠೇವಣಿ ಮಾಡಿರುವುದಿಲ್ಲ. ಬದಲಾಗಿ ತನ್ನ ವ್ಯವಹಾರದಲ್ಲಿ ಉಪಯೋಗಿಸಿಕೊಂಡಿರುತ್ತದೆ. ಈ ಕ್ರಮವು ಸಹಕಾರಿ ಕಾಯಿದೆ ಕಲಂ 62(2) ಎ ರ ಉಲ್ಲಂಘನೆಯಾಗಿರುತ್ತದೆ.

**ಆರೋಪ–15**

ಸಂಘದ ನೌಕರನಾದ ಶ್ರೀ ಎಂ.ಎಲ್. ಕುಮಾರ ಸ್ವಾಮಿರವರು ಲೆಕ್ಕಿಗನಾಗಿ ಕಾರ್ಯನಿರ್ವಹಿಸುತ್ತಿದ್ದು, ಇವರು ಸಂಘದ ಕಾರ್ಯವ್ಯಾಪ್ತಿಯಲ್ಲಿ ಪಿಗ್ಮಿ ವಸೂಲಾತಿಯನ್ನು ಸಹ ಮಾಡುತ್ತಿದ್ದಾರೆ. ಇವರಿಗೆ ಪಿಗ್ಮಿ ವಸೂಲಾತಿಯ ಶೇಕಡ 3 ರ ಕಮೀಷನ್ ಕೊಡಲಾಗುತ್ತಿದೆ. ಕರ್ನಾಟಕ ಸಹಕಾರ ಸಂಘಗಳ 1960 ರ ನಿಯಮಾವಳಿಗಳ ನಿಯಮ 18 ರ ಅವಕಾಶದಂತೆ ಸಂಘದಲ್ಲಿ ಖಾಯಂ ನೌಕರನಾಗಿ ಕೆಲಸ ನಿರ್ವಹಿಸುತ್ತಿರುವ ನೌಕರನಿಗೆ ಇಲಾಖೆಯಿಂದ ನಿಯಮ 17 ರಡಿ ವೃಂದ ಬಲ ಮತ್ತು ವೇತನ ಶ್ರೇಣಿ ಅನುಮತಿ ಪಡೆದು ನೇಮಕಾತಿ ಮಾಡಿಕೊಂಡ ನೌಕರನಿಗೆ ಸಂಬಳ ಮತ್ತು ಭತ್ಯೆಗಳನ್ನು ಹೊರತು ಪಡಿಸಿ ಇನ್ನಾವುದೇ ಕಮಿಷನ್ ಆಗಲಿ ಇತರೆ ಭತ್ಯೆಗಳನ್ನಾಗಲಿ ನೀಡಲು ಕಾನೂನಿನಲ್ಲಿ ಅವಕಾಶ ಇಲ್ಲದೆ ಇದ್ದರು ಸಂಘದ ಆಡಳಿತ ಮಂಡಳಿಯು ಕಾನೂನು ಬಾಹಿರವಾಗಿ ಶ್ರೀ ಎಂ.ಎಲ್ ಕುಮಾರ್‌ಸ್ವಾಮಿಯವರಿಗೆ ಪಿಗ್ಮಿ ಕಮಿಷನ್‌ನ್ನು 4 ವರ್ಷದಿಂದ ನೀಡಿ ಸಂಘಕ್ಕೆ ಆರ್ಥಿಕವಾಗಿ ನಷ್ಟ ಉಂಟು ಮಾಡಿರುತ್ತಾರೆ.

ಕಾರಣ ಕೇಳಿ ನೋಟೀಸು ಈ ಕೆಳಕಂಡ ಆಡಳಿತ ಮಂಡಳಿ ಸದಸ್ಯರಿಗೆ ಜಾರಿಯಾಗಿ ಸ್ವೀಕೃತಿ ಬಂದಿರುತ್ತದೆ.

| | ನೋಟೀಸು ಜಾರಿಯಾದ ದಿನಾಂಕ |
|---|---|
| ಶ್ರೀ ಎಲ್. ಗಂಗಯ್ಯ | 7–4–2007 |
| ಶ್ರೀ ಪುಟ್ಟಯ್ಯ | 7–4–2007 |
| ಶ್ರೀ ಶಿವಲಿಂಗಯ್ಯ | 7–4–2007 |
| ಶ್ರೀ ಎಂ. ಹೆಚ್. ಶಿವಣ್ಣ | 9–4–2007 |
| ಶ್ರೀ ಶಿವಕುಮಾರಯ್ಯ | 9–4–2007 |

ಆದರೆ ಈ ಕೆಳಕಂಡವರಿಗೆ ನೋಟೀಸು ಜಾರಿಯಾದ ಬಗ್ಗೆ ಸ್ವೀಕೃತಿಯು ಈ ಕಛೇರಿಗೆ ಬಂದಿರುವುದಿಲ್ಲ

ಶ್ರೀ ರಂಗಶಾಮಯ್ಯ
ಶ್ರೀ ಗೋವಿಂದಪ್ಪ
ಶ್ರೀಮತಿ ಯಶೋಧ

ಆದರೆ ಕಾರಣ ಕೇಳಿ ನೋಟಿಸು ನೀಡಲಾಗಿದ್ದ ಎಲ್ಲಾ 8 ಜನ ಆಡಳಿತ ಮಂಡಳಿ ಸದಸ್ಯರು ದಿನಾಂಕ:16.4.2007 ರಂದು ಈ ಕಛೇರಿಗೆ ಪತ್ರ ಸಲ್ಲಿಸಿ (ಈ ಪತ್ರ ದಿ:16.4.2007) ರಂದು ಕಛೇರಿಯಲ್ಲಿ ಸ್ವೀಕೃತವಾಗಿದೆ) ಸಂಘದ ವ್ಯವಸ್ಥಾಪಕರು ನಮ್ಮ ಸಂಘದ ಕಛೇರಿಯಲ್ಲಿ ಇದುವರೆವಿಗೂ ಹಾಜರಾಗದೇ ಮತ್ತು ಪುಸ್ತಕಗಳನ್ನು ಒದಗಿಸದೆಯಿರುವುದರಿಂದ ತಮ್ಮ ನೋಟೀಸಿಗೆ ಸಮಜಾಯಿಷಿ ನೀಡಲು ಸಾಧ್ಯವಾಗಿಲ್ಲ ಆದ ಕಾರಣ ತಾವುಗಳು ನಮ್ಮ ಸಂಘದ ಪ್ರಭಾರ ವ್ಯವಸ್ಥಾಪಕರಾದ ಶ್ರೀ ನರಸಿಂಹಮೂರ್ತಿರವರಿಗೆ ಸಂಘದಲ್ಲಿ ಹಾಜರಿದ್ದು ಸಂಘದ ಪುಸ್ತಕಗಳನ್ನು ಒದಗಿಸಿಕೊಡಬೇಕೆಂದು ಅವರಿಗೆ ನಿರ್ದೇಶನ ನೀಡಬೇಕೆಂದು ಕೋರಿರುತ್ತಾರೆ.

ಈ ಪತ್ರದ ಮೊದಲನೇ ಸಾರಾಂಶ ಈ ಕಛೇರಿಯಿಂದ ಉಲ್ಲೇಖ(2) ರಲ್ಲಿ ನೀಡಲಾಗಿರುವ ಕಾರಣ ಕೇಳಿ ನೋಟಿಸು ಸಂಘದ ಎಲ್ಲಾ 8 ಜನ ಆಡಳಿತ ಮಂಡಳಿ ಗಮನಕ್ಕೆ ಬಂದಿರುತ್ತದೆಯೆಂಬ ಅಭಿಪ್ರಾಯಕ್ಕೆ ಬರಲಾಗಿದೆ.

ಎರಡನೇ ಅಂಶ ಸಂಘದ ವ್ಯವಸ್ಥಾಪಕರು ಸಂಘದ ಆಡಳಿತ ಮಂಡಳಿ ನಿರ್ಣಯಕ್ಕೆ ಒಳಪಟ್ಟು ಕಾರ್ಯನಿರ್ವಹಿಸುವ ಬಗ್ಗೆ ಸಂಘದ ಉಪನಿಯಮ ಹಾಗೂ ಸಹಕಾರ ಸಂಘಗಳ ಕಾಯ್ದೆ 1959 ಕಲಂ 29(ಜಿ) ರಲ್ಲಿ ಸ್ಪಷ್ಟವಾಗಿ ಅಧಿಕಾರವನ್ನು ಆಡಳಿತ ಮಂಡಳಿಗೆ ದತ್ತವಾಗಿರುವ ಕಾರಣ ದಿನ ನಿತ್ಯದ ವ್ಯವಹಾರಗಳು ಹಾಗೂ ಸಂಘದ ಆಂತರಿಕ ಆಡಳಿತಾತ್ಮಕ ವ್ಯವಹಾರಗಳಲ್ಲಿ ಅನಾವಶ್ಯಕವಾಗಿ ಹಸ್ತಕ್ಷೇಪವು ಇಲಾಖೆ ಮಾಡಲು ಕಾನೂನಿನಡಿಯಲ್ಲಿ ಆಸ್ಪದವಿರುವುದಿಲ್ಲ. ಈ ಅಂಶವನ್ನು ಆಡಳಿತ ಮಂಡಳಿಯು ಅರಿತಿದ್ದರೂ ಪ್ರಕರಣವನ್ನು ಅನಾವಶ್ಯಕವಾಗಿ ಎಳೆದಾಡುವ ಉದ್ದೇಶ ಹೊಂದಿರುವುದನ್ನು ಗಮನಿಸಲಾಗಿದೆ. ಆದ್ದರಿಂದ ಆಡಳಿತ ಮಂಡಳಿಯು ದಿ:16.4.2007 ರಲ್ಲಿ ನೀಡಲಾಗಿರುವ ಮನವಿಯನ್ನು ಪರಿಗಣಿಸಲು ಸಾಧ್ಯವಿರುವುದಿಲ್ಲವೆಂದು ಹಾಗೂ ಸಂಘದ ಆಂತರಿಕ ವ್ಯವಹಾರದಲ್ಲಿ ಆಡಳಿತ ಮಂಡಳಿಯ ಅಧಿಕಾರವನ್ನು ಇಲಾಖೆಯು ಕಡೆಗಣಿಸಲು ಸಾಧ್ಯವಿಲ್ಲವೆಂದು ದಿನಾಂಕ:16.4.2007ರ ವಿಚಾರಣಾ ದಿನಾಂಕದಂದು ತೀರ್ಮಾನ ಕೈಗೊಳ್ಳಲಾಗಿದೆ.

ಪ್ರಕರಣದ ವಿಚಾರಣೆಯನ್ನು ದಿನಾಂಕ:12.4.2007 ರಂದು ಮಧ್ಯಾಹ್ನ 3-00 ಗಂಟೆಗೆ ತೆಗೆದುಕೊಳ್ಳಲಾಗಿದ್ದು, ವಿಚಾರಣೆಗೆ ಬ್ಯಾಂಕಿನ 8 ಜನ ಆಡಳಿತ ಮಂಡಳಿ ನಿರ್ದೇಶಕರು ಗೈರು ಹಾಜರಾಗಿರುತ್ತಾರೆ. ವಿಚಾರಣೆಯನ್ನು ಮುಂದೂಡಿ ದಿನಾಂಕ:16.4.2007, 21.4.2007, 28.4.2007 ಹಾಗೂ 30.4.2007 ಕ್ಕೆ ಕ್ರಮವಾಗಿ ಮುಂದೂಡಿ ವಿಚಾರಣಾ ದಿನಾಂಕವನ್ನು ನಿಗದಿಪಡಿಸಲಾಗಿದ್ದರೂ ಬ್ಯಾಂಕಿನ 8 ಜನ ಆಡಳಿತ ಮಂಡಳಿ ಸದಸ್ಯರು ವಿಚಾರಣೆಗೆ ಗೈರು ಹಾಜರಾಗಿರುತ್ತಾರೆ.

ಬ್ಯಾಂಕಿನ ಆಡಳಿತ ಮಂಡಳಿ ಸದಸ್ಯರು ಎಡಬಿಡದೆ ಎಸಗುತ್ತಿರುವ ದೋಷಗಳ ಬಗ್ಗೆ ತಮ್ಮನ್ನು ಸಮಜಾಯಿಷಿಕೊಳ್ಳಲು ಸ್ವಾಭಾವಿಕ ನ್ಯಾಯಹಿತ ದೃಷ್ಟಿ ಹಾಗೂ ಸಹಕಾರ ಸಂಘಗಳ ಕಾಯ್ದೆ 1959 ಕಲಂ 30(1)(ಬಿ) ರ ಅವಕಾಶದಂತೆ ಸಾಕಷ್ಟು ಅವಕಾಶಗಳನ್ನು ನೀಡಲಾಗಿದ್ದರೂ ಆಡಳಿತ ಮಂಡಳಿಯ ತಮ್ಮ ಲಿಖಿತ ಹೇಳಿಕೆ ಅಥವಾ ಇನ್ನಾವುದೇ ತರಹದ ಹೇಳಿಕೆಯನ್ನು ನೀಡದ ಕಾರಣ ಆರೋಪಗಳಿಗೆ ಆಡಳಿತ ಮಂಡಳಿ ಸದಸ್ಯರ ಹೇಳಿಕೆಗಳು ಇಲ್ಲವೆಂದು ಪರಿಗಣಿಸಲಾಗಿದೆ.

ಈ ಕಛೇರಿಯ ಉಲ್ಲೇಖ(2) ರ ಕಾರಣ ಕೇಳಿ ನೋಟೀಸು ಜಾರಿಯಾಗಿದ್ದು ಬ್ಯಾಂಕಿನ ಆಡಳಿತ ಮಂಡಳಿ ಸದಸ್ಯರು ಯಾವುದೇ ಆರೋಪಗಳನ್ನು ಅಲ್ಲಗಳೆಯದೇ ಇರುವ ಪ್ರಯುಕ್ತ ಉಲ್ಲೇಖ(2) ರ ಕಾರಣ ಕೇಳಿ ನೋಟೀಸಿನಲ್ಲಿ ತಿಳಿಸಲಾಗಿರುವ ಎಲ್ಲಾ 15 ಆರೋಪಗಳು ಸಾಬೀತಾಗಿವೆಯೆಂಬ ಅಭಿಪ್ರಾಯಕ್ಕೆ ಬಂದು ಚನ್ನೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಮಶಣಾಪುರ, ತುಮಕೂರು ತಾಲ್ಲೂಕು ಈ ಸಂಘದ ಆಡಳಿತ ಮಂಡಳಿಯನ್ನು ಸಹಕಾರ ಸಂಘಗಳ ಕಾಯಿದೆಯನ್ವಯ ರದ್ದು ಪಡಿಸುವ ಅಭಿಪ್ರಾಯಕ್ಕೆ ಬಂದು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

**ನಂ.ಡಿಆರ್‌ಟಿ/ಆ.ರ/01/2007-08 ದಿನಾಂಕ:4ನೇ ಮೇ 2007**

ಸಹಕಾರ ಸಂಘಗಳ ಕಾಯ್ದೆ 1959 ಕಲಂ 30(1) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ /69/ಸಿಎಲ್‌ಎಂ/2001 ದಿನಾಂಕ:21.12.2001 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಆರ್. ಲಿಂಗರಾಜು, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ ತುಮಕೂರು ಆದ ನಾನು ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಚನ್ನೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಮಷಣಾಪುರ, ತುಮಕೂರು ತಾಲ್ಲೂಕು ಈ ಬ್ಯಾಂಕಿನ ಆಡಳಿತ ಮಂಡಳಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ. ಆಡಳಿತ ಮಂಡಳಿ ಸ್ಥಾನದಲ್ಲಿ ಸಹಕಾರ ಸಂಘಗಳ ಕಾಯ್ದೆ 1959 ಕಲಂ 30(1)(ಬಿ)ರ ಅವಕಾಶದಂತೆ ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಮೇಲ್ವಿಚಾರಕರು, 2ನೇ ವೃತ್ತ, ತುಮಕೂರು ತಾಲ್ಲೂಕು ಇವರನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಆರು ತಿಂಗಳ ಕಾಲಾವಧಿಗೆ ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ. ಆಡಳಿತಾಧಿಕಾರಿಯು ಈ ಕೂಡಲೇ ಆಡಳಿತ ಮಂಡಳಿಯ ಸಂಪೂರ್ಣ ಪ್ರಭಾರವನ್ನು ವಹಿಸಿಕೊಂಡು ಸಹಕಾರ ಸಂಘಗಳ ಕಾಯ್ದೆ ನಿಯಮ ಹಾಗೂ ಸಂಘದ ಬೈಲಾದನ್ವಯ ಬ್ಯಾಂಕಿನ ಕಾರ್ಯನಿರ್ವಹಿಸಿ ಸಕಾಲದಲ್ಲಿ ಹೊಸದಾಗಿ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ಆಯ್ಕೆಯಾದ ಆಡಳಿತ ಮಂಡಳಿಗೆ ಪ್ರಭಾರವನ್ನು ವಹಿಸಿಕೊಡಲು ಕ್ರಮವಿಡಲು ಸೂಚಿಸಲಾಗಿದೆ.

ಈ ಆದೇಶದನ್ವಯ ವಜಾಗೊಂಡ ಆಡಳಿತ ಮಂಡಳಿ ಸದಸ್ಯರನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ನಾಲ್ಕು (04) ವರ್ಷಗಳ ಅವಧಿಗೆ ಮರು ಆಯ್ಕೆಯಾಗಲು ಅನರ್ಹರಾಗಿರುತ್ತಾರೆ.

ಈ ಆದೇಶವನ್ನು ಈ ದಿನ ದಿನಾಂಕ:4.5.2007 ರಂದು ಉಕ್ತಲೇಖನ ನೀಡಿ ತಿದ್ದಿ ತೆರೆದ ನ್ಯಾಯಾಲಯದಲ್ಲಿ ಘೋಷಿಸಿರುತ್ತೇನೆ.

**ಬಿ.ಆರ್. ಲಿಂಗರಾಜು**
ಸಹಕಾರ ಸಂಘಗಳ ಉಪನಿಬಂಧಕರು,
ತುಮಕೂರು ಜಿಲ್ಲೆ, ತುಮಕೂರು

ಪಿ.ಆರ್.675

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು, ಇವರ ನಡಾವಳಿಗಳು.**

**ಸ.ಸಂ.ಸ.ನಿ/ವ.ಅ/66/2007-08 ದಿನಾಂಕ:23ನೇ ಏಪ್ರಿಲ್ 2007**

**ಸಿಇಪಿ. ಸಂಖ್ಯೆ:07/2004-05**

**ವಿಷಯ:** ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ರಾಯಚೂರು, ಬ್ಯಾಂಕಿನ ಅಮಲ್ಜಾರಿ ಸಂಖ್ಯೆ:ಸಿಇಪಿ 07/2004-05 ಕ್ಕೆ ಸಂಬಂಧಪಟ್ಟಂತೆ ಮಾರಾಟ ಮಾಡಲಾದ ಸಾಲಗಾರರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ, 38 (7)(ಎ) ಅನ್ವಯ ಮಾರಾಟ ಸ್ಥಿರೀಕರಣಗೊಳಿಸುವ-ಬಗ್ಗೆ.

**ಉಲ್ಲೇಖ:**
1) ದಾವಾ ಸಂಖ್ಯೆ. 8251/2002-03 ದಿನಾಂಕ:26.3.2002
2) ಅಮಲ್ಜಾರಿ ಸಂಖ್ಯೆ. ಸಿಇಪಿ, 07/2004-05
3) ಮಾರಾಟಾಧಿಕಾರಿ, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ರಾಯಚೂರು ಶಾಖೆ, ಇವರ ವರದಿ ದಿನಾಂಕ:21.4.2007 ರಂತೆ.

ಶ್ರೀ ಕೆ. ಏಕನಾಥ್ ಬಿನ್ ಬಾಬುರಾವ್, ರಾಯಚೂರು, ಇವರು ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-560 004 ಇದರ ರಾಯಚೂರು ಶಾಖೆಯಿಂದ ಮನೆಕಟ್ಟುವ ಅಭಿವೃದ್ಧಿಗಾಗಿ ದುಡಿಯುವ

ಬಂಡವಾಳವಾಗಿ ರೂ. 5,00,000/- ಗಳನ್ನು ಸಾಲ ಪಡೆದಿದ್ದು ಸದರಿ ಸಾಲವನ್ನು ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಮರು ಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಸಾಲದ ಬಾಕಿ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರನ್ವಯ ಸಹಕಾರ ಸಂಘಗಳ ಉಪ ನಿಬಂಧಕರು, ರಾಯಚೂರು, ರಾಯಚೂರು ಜಿಲ್ಲೆಯಲ್ಲಿ ದಾವಾ ಹೂಡಿದ್ದು ದಾವಾ ಸಂಖ್ಯೆ.8251/2002-03 ದಿನಾಂಕ:26.3.2002 ರಂತೆ ಆದೇಶ ಪಡೆದಿದ್ದರೂ ಸಾಲದ ಬಾಕಿ ವಸೂಲಾತಿಯಾಗಿರುವುದಿಲ್ಲ 22-3-2007 ಕ್ಕೆ ಸಾಲಗಾರರಿಂದ ಬ್ಯಾಂಕಿಗೆ ಬರಬೇಕಾದ ಬಾಕಿ ರೂ. 12,85,990/- ಗಳಿದ್ದು. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಯಚೂರು, 22-03-2002 ಪತ್ರ ಆದೇಶಾನುಸಾರ ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ನಿಯಮ (34) (1) ರನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು ಇವರ ಕಛೇರಿಯಲ್ಲಿ ಅಮಲ್ಜಾರಿ ಸಂಖ್ಯೆ: 07/2004-05 ರಂತೆ ಕ್ರಮ ಕೈಗೊಳ್ಳಲು ದಾಖಲು ಮಾಡಿದ್ದು ಸದರಿ ಅಮಲ್ಜಾರಿ ಅರ್ಜಿಯನ್ನು ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ರಾಯಚೂರು ಶಾಖೆಯ ಮಾರಾಟಾಧಿಕಾರಿಯವರಿಗೆ ವಿಲೇವಾರಿಗಾಗಿ ವಹಿಸಲಾಗಿತ್ತು. ಸದರಿ ಬ್ಯಾಂಕಿನ ಮಾರಾಟ ಅಧಿಕಾರಿಯವರು ಈ ಅಮಲ್ಜಾರಿ ಅರ್ಜಿಯನ್ನು ಕಾರ್ಯಗಳಗೊಳಿಸಲು ಬಾಕಿದಾರರಾದ ಶ್ರೀ ಕೆ. ಏಕನಾಥ್‌ರವರಿಂದ ಬ್ಯಾಂಕಿಗೆ ಆಧಾರ ಮಾಡಿದ್ದ ಸ್ಥಿರಾಸ್ತಿ ಖಾತೆ 259/1-4-155/259 ಐಬಿ ಕಾಲೋನಿ ಹತ್ತಿರ, ರಾಯಚೂರು, ದಿನಾಂಕ:22.3.2007ರಂದು ಸಾರ್ವಜನಿಕ ಬಹಿರಂಗ ಹರಾಜಿಗೆ ತಂದು ಮಾರಾಟ ಮಾಡಿರುತ್ತಾರೆ. ದಿನಾಂಕ:22.3.2007 ರಂದು ನಡೆದ ಬಹಿರಂಗ ಹರಾಜಿನಲ್ಲಿ ಒಟ್ಟು 3 ಬಿಡ್ ದಾರರು ಭಾಗವಹಿಸಿದ್ದು ಈ ಪೈಕಿ ಶ್ರೀ ರಾಮ ನರೇಶ್ ಎಂಬುವವರು ರೂ. 3,30,000/-(ಮೂರು ಲಕ್ಷ ಮೂವತ್ತು ಸಾವಿರ ರೂ) ಗಳಿಗೆ ಬಿಡ್ ಮಾಡಿ ಅತಿ ಹೆಚ್ಚಿನ ಬಿಡ್‌ದಾರರಾದ ಪ್ರಯುಕ್ತ ಬ್ಯಾಂಕಿನ ಮಾರಾಟ ಅಧಿಕಾರಿಯವರು ಹರಾಜಿನ ಬಿಡ್ಡನ್ನು ಶ್ರೀ ರಾಮ ನರೇಶ್ ರವರ ಹೆಸರಿಗೆ ಬಿಡ್ಡನ್ನು ನಿಲ್ಲಿಸಿರುತ್ತಾರೆ.

ಡಿಕ್ರಿ ಆದೇಶ ಮತ್ತು ಅಮಲ್ಜಾರಿ ಅರ್ಜಿ ಪ್ರಕಾರ ಅಸಲು, ಬಡ್ಡಿ ಮತ್ತು ಇತರೆ ಖರ್ಚುಗಳು ಸೇರಿ 26-3-2007ಕ್ಕೆ ರೂ. 12,85,990/- ಬಾಕಿಯಿದ್ದು ಮಾರಾಟ ಅಧಿಕಾರಿಯವರು ಹರಾಜಿಗೆ ತಂದಿರುವ ಆಸ್ತಿಯ ಮೌಲ್ಯವನ್ನು ಸಬ್ ರಿಜಿಸ್ಟ್ರಾರ್ ಮೌಲ್ಯ ಮಾಪಕರ ಪಟ್ಟಿಯಂತೆ ರೂ. 2,40,000/- ಗಳೆಂದು ಮೌಲ್ಯ ಮಾಪನ ಮಾಡಿರುತ್ತಾರೆ. ಬಹಿರಂಗ ಹರಾಜಿನಲ್ಲಿ ಶ್ರೀ ಕೆ. ಏಕನಾಥ್ ರವರ ಆಸ್ತಿಯನ್ನು ಖರೀದಿಸಿದ ಶ್ರೀ ರಾಮ ನರೇಶ್ ರವರು ಬಿಡ್ ಮೊತ್ತದ ಶೇಕಡ 25 ರಷ್ಟು ಹಣವನ್ನು ಹರಾಜಿನ ಸ್ಥಳದಲ್ಲಿಯೇ ಡಿಕ್ರಿದಾರರ ಬ್ಯಾಂಕಿಗೆ ಪಾವತಿಸಿರುತ್ತಾರೆಂದೂ, ಉಳಿಕೆ ಬಾಕಿ ಹಣ ಮತ್ತು ನೊಂದಣಿ ವೆಚ್ಚವನ್ನು ನಿಗದಿತ ಅವಧಿಯಲ್ಲಿ ಪಾವತಿಸಿರುತ್ತಾರೆ ಎಂದು ಬ್ಯಾಂಕಿನ ಮಾರಾಟ ಅಧಿಕಾರಿಗಳು ವರದಿ ಮಾಡಿರುತ್ತಾರೆ.

ಬ್ಯಾಂಕಿನ ಮಾರಾಟ ಅಧಿಕಾರಿಯವರು ದಿನಾಂಕ:22.3.2007 ರಂದು ನಡೆಸಿದ ಬಹಿರಂಗ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ನಡವಳಿಕೆಯನ್ನು ಮಾಡಿ ಶ್ರೀ ರಾಮ ನರೇಶ್, ರಾಯಚೂರು ರವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂಗೊಳಿಸಬೇಕೆಂದು ಉಲ್ಲೇಖ(3) ರಂತೆ ಕಛೇರಿಗೆ ವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ:22.3.2007 ರಂದು ಬ್ಯಾಂಕಿನ ಮಾರಾಟಾಧಿಕಾರಿಯವರು ನಡೆಸಿದ ಬಹಿರಂಗ ಹರಾಜಿನ ನಡವಳಿಕೆಯನ್ನು ಪರಿಶೀಲಿಸಿದಾಗ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 3 ಜನ ಬಿಡ್ ದಾರರು ಭಾಗವಹಿಸಿದ್ದು, ಈ ಪೈಕಿ ಅತ್ಯಧಿಕ ಬಿಡ್‌ದಾರರಾದ ಶ್ರೀ ರಾಮ ನರೇಶ್ ರಾಯಚೂರು ಇವರಿಗೆ 3,30,000/- ರೂಗಳಿಗೆ ಮಾರಾಟವನ್ನು ನಿಲ್ಲಿಸಿರುವುದು ದಾಖಲಾತಿಗಳಿಂದ ತಿಳಿದು ಬಂದಿರುತ್ತದೆ. ಬಹಿರಂಗ ಹರಾಜು ನಡೆದ 30 ದಿನದೊಳಗಾಗಿ ಬಾಕಿದಾರರು ವಾದಿ ಬ್ಯಾಂಕಿಗೆ ಪಾವತಿಸಬೇಕಾದ ಬಾಕಿ ಸಾಲವನ್ನು ಮರುಪಾವತಿ ಮಾಡದೆಯಿರುವುದರಿಂದ ಮತ್ತು ಈ ಬಗ್ಗೆ ಕಛೇರಿಗೆ ಯಾವುದೇ ಆಕ್ಷೇಪಣೆಗಳನ್ನು ಸಲ್ಲಿಸದೇ ಇರುವುದರಿಂದ ದಿನಾಂಕ:22.3.2007 ರಂದು ಬ್ಯಾಂಕಿನ ಮಾರಾಟ ಅಧಿಕಾರಿಯವರು ನಡೆಸಿದ ಸ್ಥಿರಾಸ್ಥಿ ಹರಾಜನ್ನು ಸ್ಥಿರೀಕರಣಗೊಳಿಸಬಹುದೆಂದು ಕೈಕೊಂಡ ಕ್ರಮಗಳು ಕಾನೂನು ಬದ್ಧವಾಗಿದೆಯೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ ಮಾರಾಟ ಸ್ಥಿರೀಕರಣ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಗಂಗಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಿ ಅಧಿಕಾರಿಗಳು ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ ಬೆಂಗಳೂರು-560 004. ಆದ ನಾನು ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ/ 295/ಸಿಎಲ್‌ಎಂ. 2005-06 ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(7)(ಎ) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಸಂಖ್ಯೆ ಸಿಇಪಿ 07/2004-05 ರಲ್ಲಿನ ಸಾಲದ ಬಾಕಿ ವಸೂಲಾತಿಗಾಗಿ ಶ್ರೀ ಕೆ. ಏಕನಾಥ್, ರಾಯಚೂರು, ರಾಯಚೂರು ಜಿಲ್ಲೆ ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ:22.3.2007 ರಂದು ವಾದಿ ಬ್ಯಾಂಕಿನ ಮಾರಾಟ ಅಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ರಾಮ ನರೇಶ್, ರಾಯಚೂರು, ಜಿಲ್ಲೆ ಅತಿ ಹೆಚ್ಚಿನ ಬಿಡ್ ದಾರರಾಗಿದ್ದು ಇವರಿಗೆ ರೂ. 3,30,000/- (ಮೂರು ಲಕ್ಷ ಮೂವತ್ತು ಸಾವಿರ ರೂ.ಗಳಿಗೆ) ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸುತ್ತೇನೆ.

ಸ್ಥಿರಾಸ್ತಿಯ ವಿವರ

ಖಾತೆ ನಂ. ಪ್ಲಾಟ್ ನಂ. 259-1-4-155/259 ಐಬಿ ಕಾಲೋನಿ ಹತ್ತಿರ, ಜ್ಯೋತಿ ಕಾಲೋನಿ, ರಾಯಚೂರು, 30 X 30

ಚೆಕ್ಕುಬಂದಿ:

ಪೂರ್ವಕ್ಕೆ- 30 ರಸ್ತೆ
ಪಶ್ಚಿಮಕ್ಕೆ- ಖಾಲಿ ಜಾಗ
ಉತ್ತರಕ್ಕೆ- ಪ್ಲಾಟ್ 28
ದಕ್ಷಿಣಕ್ಕೆ- ಪ್ಲಾಟ್ 260
ಮಾರಾಟದ ಮೊಬಲಗು- ರೂ. 3,30,000/-
ಮಾರಾಟದ ದಿನಾಂಕ- 22-03-2007

ಮೇಲ್ಕಂಡ ಸ್ಥಿರಾಸ್ತಿಯ ವರ್ಗಾವಣೆಯನ್ನು ಸುಸ್ತಿದಾರರು ಪಾವತಿಸಬೇಕಾಗಿರುವ ಭಾಗಶಃ ವಸೂಲಾತಿಗಾಗಿ ವರ್ಗಾವಣೆ ಮಾಡಲಾಗಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:23.4.2007 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಪಿ.ಆರ್. 652 ಹಾಗೂ ವಸೂಲಿ ಅಧಿಕಾರಿ, ಕರ್ನಾಟಕ ರಾಜ್ಯ ಕೈಗಾರಿಕಾ
ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರ ಕಾರ್ಯಾಲಯ.**

**ಅಧಿಭಾರ ಅರ್ಜಿ ಸಂಖ್ಯೆ:2:2006-07**

**ಸಿಇಪಿ. ಸಂಖ್ಯೆ:07/2004-05**

| **ಅರ್ಜಿದಾರರು:** | **ಎದುರು ಅರ್ಜಿದಾರರು:** |
|---|---|
| ವ್ಯವಸ್ಥಾಪಕರು ಟೌನ್ ಸಹಕಾರ ಸಂಘ (ನಿ), ತುರುವೇಕೆರೆ. | ಶ್ರೀ ಲಕ್ಷ್ಮಿನಾರಾಯಣ ಮಾಜಿ ಪ್ರಭಾರ ವ್ಯವಸ್ಥಾಪಕರು ಟೌನ್ ಸಹಕಾರ ಸಂಘ (ನಿ), ತುರುವೇಕೆರೆ. |

**ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103 ರ ಮೇರೆಗೆ ಹೊರಡಿಸಿದ ತೀರ್ಪು ಮುನ್ನ ಜಪ್ತಿ ಆಜ್ಞೆ**

ಕರ್ನಾಟಕ ರಾಜ್ಯ ಸಹಕಾರ ಸಂಘ (ನಿ) ತುರುವೇಕೆರೆ ಟೌನ್ ಇದರ ಮಾಜಿ ಪ್ರಭಾರ ವ್ಯವಸ್ಥಾಪಕರಾದ ಶ್ರೀ ಲಕ್ಷ್ಮೀನಾರಾಯಣ ಇವರು ಸಂಘದಲ್ಲಿ ಪ್ರಭಾರ ವ್ಯವಸ್ಥಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ನಿಯಮ ಬಾಹಿರವಾಗಿ ಮುಂದಿನ ದಿನಾಂಕಗಳನ್ನು ನಮೂದಿಸಿದ ಚೆಕ್‌ಗಳನ್ನು ಶ್ರೀ ಬಿ. ಮಂಜುನಾಥ್‌ರವರಿಂದ ಸಂಗ್ರಹಣೆಗಾಗಿ ಪಡೆದಿರುವುದಾಗಿ ಚೆಕ್‌ಗಳನ್ನು ನಮೂದು ಮಾಡಿರುವ ದಿನಾಂಕಗಳಿಗಿಂತ 2-3 ತಿಂಗಳು ಮುಂಚಿತವಾಗಿ ಮಂಜುನಾಥ ರವರ ಹೆಸರಿನಲ್ಲಿ ಚೆಕ್‌ಗಳು ಇಲ್ಲದೆ ಶ್ರೀಪಾದ ಎಂಬುವವರ ಹೆಸರಿನಲ್ಲಿರುವ ಚೆಕ್‌ಗಳನ್ನು ಸಂಗ್ರಹಣೆಗಾಗಿ ಪಡೆದಿರುವುದಾಗಿ ತಿಳಿಸಿ ಮಂಜುನಾಥರವರಿಗೆ ಹಣ ಪಾವತಿಸಿರುವುದಾಗಿ ನಗದು ಪುಸ್ತಕದಲ್ಲಿ ಖರ್ಚು ಹಾಕಲಾಗಿದೆ. ಆದರೆ ಚೆಕ್‌ಗಳನ್ನು ನಗದೀಕರಿಸಲು ಕಳುಹಿಸಿದೆ. ಸಂಘದಲ್ಲಿರುವ ನಗದು ಹಣವನ್ನು ಖರ್ಚು ಹಾಕಿರುವುದು ಹಾಗೂ ಚೆಕ್‌ಗಳನ್ನು ನಿಗಧಿತ ಸಮಯದಲ್ಲಿ ನಗದೀಕರಿಸಲು ಕಳುಹಿಸದೆ. ಸುಮಾರು 5-6 ತಿಂಗಳು ತಡವಾಗಿ ಕಳುಹಿಸಿ ಚೆಕ್‌ಗಳ ಖಾತೆಯಲ್ಲಿ ಹಣವಿಲ್ಲದೆ ವಾಪಸ್ಸು ಬಂದಿದ್ದು ಈ ನಗದಾಗದೆ ಬಂದ 12 ಚೆಕ್‌ಗಳ ಪೈಕಿ 3 ಚೆಕ್‌ಗಳಿಗೆ ಸಿವಿಲ್ ನ್ಯಾಯಾಲಯದಲ್ಲಿ ದಾವೆ ಹೂಡಿ ಉಳಿಕೆ ಚೆಕ್‌ಗಳ ಮೇಲೆ ದಾವ ಹೂಡದೆ ಸಂಘಕ್ಕೆ ರೂ. 406150-00 ಗಳನ್ನು ಸಂಘಕ್ಕೆ ನಷ್ಟ ಉಂಟು ಮಾಡಿರುವುದನ್ನು ವಸೂಲಿಗೆ ಸಂಘದ 2003-2004ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯಲ್ಲಿ ಇಟ್ಟಿರುವುದರಿಂದ ಸದರಿ ಹಣದ ವಸೂಲಾತಿಗಾಗಿ ಅರ್ಜಿದಾರರು ಸಹಕಾರ ಸಂಘಗಳ ಕಾಯಿದೆ ಕಲಂ 69 ರಡಿಯಲ್ಲಿ ಅಧಿಭಾರ ಅರ್ಜಿ ದಾಖಲು ಮಾಡಿ ವಸೂಲಾತಿ ಆದೇಶ ಕೋರಿರುತ್ತಾರೆ. ಆದ್ದರಿಂದ ಪ್ರಕರಣವನ್ನು ಕಡತದ ಮೇಲೆ ತೆಗೆದುಕೊಂಡು ಅಧಿಭಾರ ಅರ್ಜಿ ಸಂಖ್ಯೆ:2:2006-07 ರಂತೆ ದಾಖಲಾಗಿ ಈ ನ್ಯಾಯಾಲಯದಲ್ಲಿ ವಿಚಾರಣೆ ನಡೆಯುತ್ತಿರುತ್ತದೆ.

ವಸೂಲಾತಿ ಮೊತ್ತಕ್ಕೆ ತಕ್ಕ ಮೌಲ್ಯದ ಸ್ಥಿರಾಸ್ತಿಯನ್ನು ತೀರ್ಪು ಮುನ್ನ ನ್ಯಾಯಾಲಯದ ವ್ಯಾಪ್ತಿಗೆ ಒಳಪಡಿಸುವಂತೆ ಅರ್ಜಿದಾರರು ಮನವಿ ಮಾಡಿದ್ದರ ಮೇರೆಗೆ ಸಂಘದ ಹಿತದೃಷ್ಟಿಯಿಂದ ಭದ್ರತೆಗಾಗಿ ಅಧಿಸೂಚನೆಯಲ್ಲಿ ಸೂಚಿಸಿರುವ ಎದುರು ಅರ್ಜಿದಾರರ ಸ್ಥಿರಾಸ್ತಿಯನ್ನು ಪರಭಾರೆ ಮಾಡುವ ಅಥವಾ ಮಾರಾಟ ಮಾಡುವ ದಾನ ಮಾಡುವ ಅಥವಾ ಇನ್ನಾವುದೇ ರೀತಿ ವರ್ಗಾಯಿಸುವುದನ್ನು ತಡೆಗಟ್ಟಲು ಈ ಕೆಳಕಂಡ ಷರತ್ತಿನೊಂದಿಗೆ ತೀರ್ಪು ಮುನ್ನ ಜಪ್ತಿ ಆದೇಶ ಹೊರಡಿಸಿದೆ.

**ಆದೇಶ**

**ನಂ:ಸನಿ-34:ಡಿಡಿಎಸ್:ಕಲಂ 103:14:2007-2008 ದಿನಾಂಕ: ಮೇ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಆದ ನಾನು ಸಹಕಾರ ಸಂಘಗಳ ಕಾಯಿದೆ ಕಲಂ 103 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001 ರ ಪ್ರಕಾರ ದತ್ತವಾಗಿರುವ ಅಧಿಕಾರ ಉಪಯೋಗಿಸುತ್ತಾ ಈ

ಕೆಳಗೆ ಕಾಣಿಸಿರುವ ಸ್ಥಿರಾಸ್ತಿಯನ್ನು ತೀರ್ಪು ಮುನ್ನ ಷರತ್ತಿನೊಂದಿಗೆ ಜಪ್ತಿಗೊಳಿಸಲಾಗಿದೆ ಎಂದು ಆದೇಶಿಸಿದೆ. ಅಲ್ಲದೆ ಎದುರು ಅರ್ಜಿದಾರರು ತೀರ್ಪು ಮುನ್ನ ಷರತ್ತು ಪೂರ್ವಿಕ ಜಪ್ತಿ ಆಜ್ಞೆಯಿಂದ ವಿಮುಕ್ತರಾಗಲು ಇಚ್ಛಿಸಿದಲ್ಲಿ ಜಪ್ತಿಗೊಳಿಸಲ್ಪಟ್ಟ ಸ್ಥಿರಾಸ್ತಿಯ ಮೌಲ್ಯಕ್ಕೆ ತಕ್ಕಷ್ಟು ಮತ್ತು ನ್ಯಾಯಾಲಯವು ಸರಿ ಎಂದು ಭಾವಿಸುವ ನಗದು ಭದ್ರತೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪ ವಿಭಾಗ ತಿಪಟೂರು ಇವರ ಹೆಸರಿನಲ್ಲಿ ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ), ತಿಪಟೂರು ಶಾಖೆಯಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ರಸೀತಿ ಅಥವಾ ಚಲನ್ ಪ್ರತಿಯನ್ನು ದಿನಾಂಕ:20.6.2007 ರೊಳಗಾಗಿ ಈ ಕೆಳಕಂಡ ಸಹಿದಾರರಿಗೆ ಹಾಜರುಪಡಿಸುವುದರ ಮೂಲಕ ಜಪ್ತಿ ಆಜ್ಞೆಯಿಂದ ಹೊರಗುಳಿಯಬಹುದೆಂದು ಸಂಬಂಧಿಸಿದವರಿಗೆ ತಿಳುವಳಿಕೆ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಷರತ್ತನ್ನು ಪೂರೈಸಲು ವಿಫಲರಾದರೆ ಈ ಜಪ್ತಿ ಆಜ್ಞೆಯನ್ನು ಖಾಯಂ ಗೊಳಿಸಲಾಗುವುದೆಂದು ತಿಳಿಯುವುದು ಮತ್ತು ಈ ಕೆಳಕಂಡ ಸ್ಥಿರಾಸ್ತಿಯನ್ನು ಪಡೆಯುವ ಅಥವಾ ಖರೀದಿಸುವ ದಾನ ಪಡೆಯುವ ಅಥವಾ ಇನ್ನಾವುದೇ ರೀತಿಯಲ್ಲಿ ಹೊಂದುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಈ ಷರತ್ತು ಸಹಿತ ಜಪ್ತಿ ಆಜ್ಞೆಗೆ ಒಳಪಡುವುದೆಂದು ಆದೇಶಿಸಿದೆ. ಒಂದು ವೇಳೆ ಈ ಜಪ್ತಿ ಆಜ್ಞೆಯನ್ನು ಉಲ್ಲಂಘಿಸಿ ಸ್ಥಿರಾಸ್ತಿಯನ್ನು ಪಡೆಯುವ ಖರೀದಿಸುವ ದಾನ ಪಡೆಯುವ ಮತ್ತು ಇನ್ನಾವುದೇ ರೀತಿ ವ್ಯಕ್ತಿ ಅಥವಾ ಸಂಸ್ಥೆಗಳು ಹೊಂದಿದರೆ ಸಿಂಧುವಾಗುವುದಿಲ್ಲವೆಂದು ಸಾರ್ವಜನಿಕರಲ್ಲಿ ತಿಳಿಯಪಡಿಸಿದೆ.

**ಜಪ್ತಿ ಆಜ್ಞೆಗೆ ಒಳಗಾದ ಸ್ಥಿರಾಸ್ತಿ ವಿವರ**

| ಕ್ರ. ಸಂ | ಹಕ್ಕುದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಹೋಬಳಿ ತಾಲ್ಲೂಕು | ಅಸೆಸ್ ಮೆಂಟ್ ನಂ | ಆಸ್ತಿಯ ನಂ | ವಿಸ್ತೀರ್ಣ | ತರಹೆ |
|---|---|---|---|---|---|---|---|
| 1 | ಲಕ್ಷ್ಮೀನಾರಾಯಣ ಬಿನ್ ಟಿ.ಎಂ. ಬ್ಯಾಟಪ್ಪ | ತುರುವೇಕೆರೆ ಟೌನ್ | ತುರುವೇಕೆರೆ ತಾಲ್ಲೂಕು | 860 | 706/1 | 17–$^1/_2$ 45 | ಆರ್ ಪಿಸಿ ಬಿಲ್ಡಿಂಗ್ |

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿ:7–5–2007 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ತಿಪಟೂರು ಉಪವಿಭಾಗ, ತಿಪಟೂರು

ಪಿ.ಆರ್.667

**ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಇವರ ನಡವಳಿಗಳು**

**ವಿಷಯ :** ಶ್ರೀ ಬಿ.ಪಿ. ಅಂಗಡಿ ಕೃಷಿ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಮುಂಡರಗಿ ವ್ಯಾಪ್ತಿಯಲ್ಲಿನ ಹಿರೇವಡ್ಡಟ್ಟಿ ರೈತ ಸಂಪರ್ಕ ಕೇಂದ್ರ, ಡಂಬಳ ಇವರ ಅನಧಿಕೃತ ಗೈರು ಹಾಜರಿ ಹಾಗೂ ಪರಿವೀಕ್ಷಣಾ ಅವಧಿ ಘೋಷಣೆಯಾಗದಿರುವ ಬಗ್ಗೆ ಶಿಸ್ತು ಕ್ರಮ.

**ಓದಲಾಗಿದೆ :**
1) ಜಂಟಿ ಕೃಷಿ ನಿರ್ದೇಶಕರು ಗದಗ ಇವರ ಪತ್ರದ ಸಂಖ್ಯೆ:ಜಂಕೃನಿಗ:ಆ1:ವಿವ 52:2490–93: 2004–05, ದಿನಾಂಕ:12.15–7–2004.
2) ಈ ಕಛೇರಿಯ ಸೂಚನಾ ಪತ್ರದ ಸಂಖ್ಯೆ: ಸಿಬ್ಬಂದಿ–1:ವಿಚಾರಣೆ–7:6:2003–04, ದಿನಾಂಕ:2–8–2004
3) ಶ್ರೀ ಬಿ.ಪಿ. ಅಂಗಡಿ ಕೃಷಿ ಸಹಾಯಕ ಇವರ ಸ್ವೀಕೃತಿ ಪತ್ರದ ದಿನಾಂಕ:24–8–2004.
4) ಈ ಕಛೇರಿಯ ನಡವಳಿಕೆಗಳ ಕಛೇರಿ ಆದೇಶ ಸಂಖ್ಯೆ:ಸಿಬ್ಬಂದಿ–1: ವಿಚಾರಣೆ–7:6:2003–04, ದಿನಾಂಕ:10–11–2004.
5) ಶ್ರೀ ಬಿ.ಪಿ. ಅಂಗಡಿ ಕೃಷಿ ಸಹಾಯಕ ಇವರ ಸ್ವೀಕೃತಿ ಪತ್ರದ ದಿನಾಂಕ:30–8–2006.
6) ವಿಚಾರಣಾಧಿಕಾರಿಗಳ ಪತ್ರದ ದಿನಾಂಕ: 19–4–2006.
7) ಶ್ರೀ ಬಿ.ಪಿ. ಅಂಗಡಿ, ಕೃಷಿ ಸಹಾಯಕ ಇವರ ಸ್ವೀಕೃತಿ ದಿನಾಂಕ:28–4–2006.
8) ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿಯ ದಿನಾಂಕ:3–11–2006.
9) ಇಲಾಖೆಯ ಎರಡನೇ ಕಾರಣ ಕೇಳುವ ಸೂಚನಾ ಪತ್ರದ ಸಂಖ್ಯೆ: ಸಿಬ್ಬಂದಿ–1:ವಿಚಾರಣೆ 7:6:2003–04, ದಿನಾಂಕ:23–11–2006: 4–12–2006.
10) ಶ್ರೀ ಬಿ.ಪಿ. ಅಂಗಡಿ, ಕೃಷಿ ಸಹಾಯಕ ಇವರ ಸ್ವೀಕೃತಿ ದಿನಾಂಕ:10.1.2007.

**ಪ್ರಸ್ತಾವನೆ :**

ಶ್ರೀ ಬಿ.ಪಿ. ಅಂಗಡಿ, ಕೃಷಿ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರು, ರೋಣ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ:21–11–87 ರಿಂದ 31–5–89 ಮತ್ತು 1–3–90 ರಿಂದ 19–4–98 ರವರೆಗೆ ಸಹಾಯಕ ಕೃಷಿ ನಿರ್ದೇಶಕರು, ಕಲಘಟಗಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ:19–6–2000 ರಿಂದ 20–7–2000 21–12–2000 ರಿಂದ 17–7–2001 ಮತ್ತು 23–7–2001 ರಿಂದ 29–6–2002 ಹಾಗೂ ಸಹಾಯಕ ಕೃಷಿ ನಿರ್ದೇಶಕರು, ಮುಂಡರಗಿ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ:21–8–2002 ರಿಂದ ಇಲ್ಲಿಯವರೆಗೆ ಸರ್ಕಾರಿ ಕೆಲಸಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವ ಬಗ್ಗೆ ಶಿಸ್ತುಕ್ರಮ ಜರುಗಿಸಲು ಮೇಲೆ ಓದಲಾದ ಕ್ರ.ಸಂ (1) ರಲ್ಲಿ ಜಂಟಿ ಕೃಷಿ ನಿರ್ದೇಶಕರು, ಗದಗ ಇವರು ದಾಖಲಾತಿಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಈ ಪ್ರಸ್ತಾವನೆಯನ್ನು

ಪರಿಶೀಲಿಸಲಾಗಿ ಓದಲಾದ (2) ರಲ್ಲಿ ಇಲಾಖೆಯ ಸೂಚನಾ ಪತ್ರದ ದಿನಾಂಕ:2-8-2004 ರನ್ವಯ ನೌಕರರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11 ರಡಿಯಲ್ಲಿ ಮಾಡಲಾದ ಆರೋಪಗಳ ಪಟ್ಟಿ ಅನುಬಂಧ-1 ರಿಂದ 4ನ್ನು ಜಾರಿ ಮಾಡಿ 15 ದಿನಗಳಲ್ಲಿ ಲಿಖಿತ ಸಮಜಾಯಿಷಿ ಸಲ್ಲಿಸಲು ಸೂಚಿಸಲಾಯಿತು. ನಿಗಧಿತ ಅವಧಿಯಲ್ಲಿ ಲಿಖಿತ ಹೇಳಿಕೆ ಸಲ್ಲಿಸದಿದ್ದಲ್ಲಿ ನೌಕರರ ಸಮಜಾಯಿಷಿ ಏನೂ ಇಲ್ಲವೆಂದು ಪರಿಗಣಿಸಿ ಏಕಪಕ್ಷೀಯವಾಗಿ ನಿಯಮಾನುಸಾರ ಮುಂದಿನ ಕ್ರಮ ಜರುಗಿಸಲಾಗುವುದೆಂದು ತಿಳಿಸಿ ನೌಕರರಿಗೆ ಜಾರಿಗೊಳಿಸಲಾಯಿತು. ಓದಲಾದ (3) ರಲ್ಲಿ ನೌಕರರು ದಿನಾಂಕ:24-8-2004 ರಂದು ಸೂಚನಾ ಪತ್ರವನ್ನು ಪಡೆದುಕೊಂಡು ಸ್ವೀಕೃತಿ ಪತ್ರ ಸಲ್ಲಿಸಿರುತ್ತಾರೆ. ನಿಗಧಿತ ಅವಧಿ ಮುಕ್ತಾಯವಾದರೂ ಸಹ ಪ್ರತಿವಾದವನ್ನು ಸಲ್ಲಿಸಿರುವುದಿಲ್ಲ. ಆಪಾದಿತರ ಲಿಖಿತ ಹೇಳಿಕೆಗಾಗಿ ನಿಗಧಿತ ಅವಧಿ ಮುಗಿದ ನಂತರವೂ ಸಾಕಷ್ಟು ಕಾಲಾವಕಾಶ ನೀಡಿ ಹೇಳಿಕೆಯನ್ನು ನಿರೀಕ್ಷಿಸಲಾಯಿತು. ಆದರೂ ಆಪಾದಿತರಿಂದ ಲಿಖಿತ ಹೇಳಿಕೆ ಬರಲಿಲ್ಲವಾದ್ದರಿಂದ ಆಪಾದಿತರ ವಿರುದ್ಧದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11(2), 11(5)(ಎ) ನಿಯಮದಡಿ ಓದಲಾದ (4) ರಲ್ಲಿ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿಯೂ ಮತ್ತು ಪ್ರಕರಣವನ್ನು ವಿಚಾರಣಾ ಕಾಲದಲ್ಲಿ ಮಂಡಿಸಲು ಆಡಳಿತಾಧಿಕಾರಿ, ಜಂಟಿ ಕೃಷಿ ನಿರ್ದೇಶಕರ ಕಛೇರಿ, ಉತ್ತರ ಕನ್ನಡ ಜಿಲ್ಲೆ ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಿಸಿ ಆದೇಶಿಸಲಾಗಿರುತ್ತದೆ.

ಇವರು ಇಲಾಖೆ ಪರೀಕ್ಷೆ ಪಾಸು ಮಾಡದೇ ಕರ್ನಾಟಕ ನಾಗರೀಕ ಸೇವಾ ನಿಯಮ 1977ರ ನಿಯಮ 5(1)(ಬಿ) ಪ್ರಕಾರ ಪರಿವೀಕ್ಷಣಾ ಅವಧಿ ತೃಪ್ತಿಕರವೆಂದು ಘೋಷಣೆಯಾಗಿಲ್ಲದ ಬಗ್ಗೆ ಹೆಚ್ಚುವರಿ ದೋಷಾರೋಪಣಾ ಪಟ್ಟಿ ಅನುಬಂಧ-1 ರಿಂದ 4ನ್ನು ಜಾರಿಗೊಳಿಸಲಾಯಿತು ಹಾಗೂ ಇದೇ ವಿಚಾರಣಾಧಿಕಾರಿಯನ್ನು ಹೆಚ್ಚುವರಿ ದೋಷಾರೋಪಣ ಪಟ್ಟಿ ಸೇರಿಸಿಕೊಂಡು ವಿಚಾರಣೆ ನಡೆಸಲು ಕೋರಲಾಯಿತು. ಓದಲಾದ (5) ರಲ್ಲಿ ನೌಕರರು ಸ್ವೀಕೃತಿ ಪತ್ರವನ್ನು ಸಲ್ಲಿಸಿರುತ್ತಾರೆ. ನಿಗಧಿತ ಅವಧಿ ಮುಗಿದರೂ ಪ್ರತಿವಾದವನ್ನು ಆರೋಪಿತ ನೌಕರರು ಸಲ್ಲಿಸಿರುವುದಿಲ್ಲ. ಓದಲಾದ (6) ರಲ್ಲಿ ವಿಚಾರಣೆಗೆ ಹಾಜರಾಗಲು ಆಪಾದಿತ ನೌಕರರಿಗೆ ನೋಟೀಸ್ ಜಾರಿಗೊಳಿಸಿದ್ದು, ಓದಲಾದ (7) ರಲ್ಲಿ ನೌಕರರು ದಿನಾಂಕ:28-4-2006 ರ ಸ್ವೀಕೃತಿ ಪತ್ರವನ್ನು ಸಲ್ಲಿಸಿದ್ದಾರೆ. ಓದಲಾದ (8) ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಆಪಾದಿತ ನೌಕರರ ವಿರುದ್ಧದ ಆರೋಪಗಳು ಸಾಬೀತಾಗಿರುವುದರಿಂದ ದಂಡನೆಯನ್ನು ಏಕೆ ವಿಧಿಸಬಾರದು ಎಂಬ ಲಿಖಿತ ಹೇಳಿಕೆಯನ್ನು ಸಲ್ಲಿಸಲು ಓದಲಾದ (9) ರಲ್ಲಿ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ವಿಚಾರಣಾ ವರದಿಯೊಂದಿಗೆ ಆರೋಪಿತರಿಗೆ ಜಾರಿಗೊಳಿಸಲಾಯಿತು. ಹಾಗೂ ನಿಗಧಿತ ಅವಧಿಯಲ್ಲಿ ಲಿಖಿತ ಹೇಳಿಕೆಯು ಬಾರದಿದ್ದಲ್ಲಿ ದಂಡನೆ ವಿಧಿಸುವ ಬಗ್ಗೆ ಕ್ರಮ ಕೈಗೊಳ್ಳಲಾಗುವುದೆಂದು ಸಹ ತಿಳಿಸಲಾಗಿತ್ತು. ಓದಲಾದ (10) ರಲ್ಲಿ ಆಪಾದಿತ ನೌಕರರು ಸ್ವೀಕೃತಿ ಪತ್ರವನ್ನು ಸಲ್ಲಿಸಿದ್ದು, ನಿಗಧಿತ ಅವಧಿ ಮುಗಿದರೂ ಲಿಖಿತ ಹೇಳಿಕೆ ಸಲ್ಲಿಸದೇ ಇದ್ದುದರಿಂದ ಯಾವುದೇ ಉತ್ತರವಿಲ್ಲವೆಂದು ಪರಿಗಣಿಸಿದೆ.

ವಿಚಾರಣಾ ವರದಿಯನ್ವಯ ಆಪಾದಿತರ ಮೇಲಿನ 2 ಆರೋಪಗಳಲ್ಲಿನ 1ನೇ ಆರೋಪದಲ್ಲಿ ಸಹಾಯಕ ಕೃಷಿ ನಿರ್ದೇಶಕರು ರೋಣ ಕಛೇರಿಯ ಗೈರು ಹಾಜರಾತಿಯ ದಿನಾಂಕ:21-11-87 ರಿಂದ 31-5-89 ಮತ್ತು 1-3-90 ರಿಂದ 19-4-98 ರವರೆಗಿನ ಗೈರು ಹಾಜರಿ ಬಗ್ಗೆ ಶಿಸ್ತು ಪ್ರಾಧಿಕಾರಿಗಳ ಪರವಾಗಿ ಸಹಾಯಕ ಕೃಷಿ ನಿರ್ದೇಶಕರು, ರೋಣ ಇವರು ಸಾಕ್ಷ್ಯ ನೀಡಲಿಲ್ಲ ಎಂಬ ಕಾರಣದಿಂದ ಆರೋಪ ಸಾಬೀತಾಗಿಲ್ಲ ಎಂಬುದನ್ನು ಒಪ್ಪಲಾಗುವುದಿಲ್ಲ. ಏಕೆಂದರೆ ಸದರಿ ಆರೋಪಿತ ನೌಕರರು ವಿಚಾರಣೆಗೆ ಗೈರು ಹಾಜರಾಗಿದ್ದು ಪ್ರಕರಣಕ್ಕೆ ಸಂಬಂಧಿಸಿದ ದಾಖಲಾತಿಗಳನ್ವಯ ಈ ದೀರ್ಘಾವಧಿಯ ಗೈರು ಹಾಜರಿ ಆರೋಪವೂ ಸಹ ಸಾಬೀತಾಗಿದೆ ಎಂದೇ ಪರಿಗಣಿಸಲಾಗಿದೆ. ಹಾಗೂ ಇವರು ಎಲ್ಲಾ ವಿಚಾರಣೆಗಳಿಗೂ ಗೈರು ಹಾಜರಾಗಿದ್ದರಿಂದ ಈ ಅವಧಿಯು ಮತ್ತು ಸಹಾಯಕ ಕೃಷಿ ನಿರ್ದೇಶಕರು, ಕಲಘಟಗಿ ಕಛೇರಿಯ ಗೈರು ಹಾಜರಿ ದಿನಾಂಕ 19-6-2000 ರಿಂದ 20-7-2000, 21-12-2000 ರಿಂದ 17-7-2001 ಮತ್ತು 23-7-2001 ರಿಂದ 29-6-2002 ರವರೆಗೆ ಮತ್ತು ಸಹಾಯಕ ಕೃಷಿ ನಿರ್ದೇಶಕರು, ಮುಂಡರಗಿ ಕಛೇರಿಯ ಗೈರು ಹಾಜರಿ ದಿನಾಂಕ: 21-8-2002 ರಿಂದ ಇಲ್ಲಿಯವರೆಗಿನ ಈ ಅವಧಿಗಳ ಗೈರು ಹಾಜರಾತಿಯು ಆರೋಪವು ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ.

ಎರಡನೆಯ ಆರೋಪದಲ್ಲಿ ಆರೋಪಿತ ನೌಕರರು ದಿನಾಂಕ:4.3.1976ರಲ್ಲಿ ಕೃಷಿ ಸಹಾಯಕರಾಗಿ ಸರ್ಕಾರಿ ಸೇವೆಗೆ ಸೇರಿದ್ದು, ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿ 1977ರ ನಿಯಮ 5(1)(ಬಿ) ಅನ್ವಯ ನಿಗಧಿತ ಇಲಾಖಾ ಪರೀಕ್ಷೆಯಲ್ಲಿ ಸದರಿ ನೌಕರರು ಉತ್ತೀರ್ಣರಾಗದೇ ಪರಿವೀಕ್ಷಣಾ ಅವಧಿಯು ಘೋಷಣೆಯಾಗಿಲ್ಲದೆ ಸೇವಾವಧಿಯು ತೃಪ್ತಿಕರವೆಂದು ಘೋಷಣೆಯಾಗಿಲ್ಲ. ಆದ್ದರಿಂದ 2ನೇ ಆರೋಪವು ಸಾಬೀತಾಗಿರುತ್ತದೆ. ವಿಚಾರಣೆಯಲ್ಲಿ ಎರಡೂ ಆರೋಪಗಳು ಸಾಕ್ಷ್ಯ ಹಾಗೂ ದಾಖಲಾತಿಗಳ ಆಧಾರದ ಮೇಲೆ ಸಾಬೀತಾಗಿರುವುದರಿಂದ ಶ್ರೀ ಬಿ.ಪಿ. ಅಂಗಡಿ, ಕೃಷಿ ಸಹಾಯಕ ಇವರನ್ನು ಆರೋಪಿ ಎಂದೇ ಪರಿಗಣಿಸಿ ಈ ಕೆಳಕಂಡಂತೆ ದಂಡನೆ ವಿಧಿಸಲು ನಿರ್ಧರಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ:ಸಿಬ್ಬಂದಿ -1:ವಿಚಾರಣೆ-7:6:2003-04, ದಿನಾಂಕ:9ನೇ ಮೇ 2007**

ಈ ಕೆಳಗೆ ಸಹಿ ಮಾಡಿರುವ ಡಾ: ಎಂ.ಮಲ್ಲಪ್ಪ ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಆದ ನಾನು ಈ ಪ್ರಕರಣವನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಬಿ.ಪಿ. ಅಂಗಡಿ, ಕೃಷಿ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಮುಂಡರಗಿ ಇವರ ಅನಧಿಕೃತ ಗೈರು ಹಾಜರಿ ಮತ್ತು ನಿಗಧಿತ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆಯಾಗದೇ ಪರಿವೀಕ್ಷಣಾ ಅವಧಿ ಘೋಷಣೆಯಾಗಿಲ್ಲದ ಈ ಎರಡೂ ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಇವರನ್ನು ಆರೋಪಿ ಎಂದೇ ಪರಿಗಣಿಸಿ ಆದೇಶಿಸಿರುತ್ತೇನೆ. ಹಾಗೂ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(viii) ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಿ ಆದೇಶಿಸಿರುತ್ತೇನೆ.

ಸದರಿ ನೌಕರರ ಅನಧಿಕೃತ ಗೈರು ಹಾಜರು ಅವಧಿಯನ್ನು " ಅನಧಿಕೃತ ಗೈರು ಹಾಜರಿ" ಎಂದೇ ಪರಿಗಣಿಸಿ ಆದೇಶಿಸಿರುತ್ತೇನೆ.

ಡಾ: ಎಂ. ಮಲ್ಲಪ್ಪ
ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು.

ಪಿ.ಆರ್. 631

**ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಇವರ ನಡವಳಿಗಳು**

**ವಿಷಯ :** ಶ್ರೀ ಐ.ಎಂ. ದೇವಲಾಪೂರ, ಕೃಷಿ ಸಹಾಯಕ , ಬೀಡಿ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಖಾನಾಪೂರ ಇವರು ಕಛೇರಿ ಮುಖ್ಯಸ್ಥರ ಸಹಿಯನ್ನು ಪೋರ್ಜರಿ ಮಾಡಿ ಹಾಗೂ ಕಛೇರಿ ಮೊಹರುಗಳನ್ನು (ಸೀಲು) ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ಶಿಸ್ತು ಕ್ರಮ.

**ಓದಲಾಗಿದೆ :**

1) ಜಂಟಿ ಕೃಷಿ ನಿರ್ದೇಶಕರು ಬೆಳಗಾಂ ಇವರ ಪತ್ರ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ:ಆಯ್ ಎಂ.ದೇ:ಕೃಸ:ಪೋರ್ಜರಿ ಸಹಿ 2004-05, ದಿನಾಂಕ:19-2-2005.

2) ಇಲಾಖಾ ಪತ್ರ ಸಂಖ್ಯೆ:ಸಿಬ್ಬಂದಿ-1:ವಿಚಾರಣೆ-5:24:2004-05 ದಿನಾಂಕ:22.3.2005

3) ಜಂಟಿ ಕೃಷಿ ನಿರ್ದೇಶಕರು, ಬೆಳಗಾಂ ಇವರ ಪತ್ರ ಸಂಖ್ಯೆ: ಸಿಬ್ಬಂದಿ -1:ವಿಚಾರಣೆ:ಆಯ್ ಎಂ.ದೇ: ಕೃಸ:ಪೋರ್ಜರಿ ಸಹಿ:04-05, ದಿನಾಂಕ:28-4-2005.

4) ಇಲಾಖಾ ಪತ್ರ ಸಂಖ್ಯೆ:ಸಿಬ್ಬಂದಿ-1:ವಿಚಾರಣೆ-5:24:04-05, ದಿನಾಂಕ:13.6.2005.

5) ಸಹಾಯಕ ಕೃಷಿ ನಿರ್ದೇಶಕರು, ಖಾನಾಪೂರ ಇವರ ಪತ್ರ ಸಂಖ್ಯೆ:ಸಕೃನಿಖಾ:ಸಿಬ್ಬಂದಿ:ಸಿಆರ್-56:04-05, ದಿನಾಂಕ:25.6.2005

6) ಶ್ರೀ ಐ.ಎಂ. ದೇವಲಾಪೂರ, ಕೃಷಿ ಸಹಾಯಕ ಬೀಡಿ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಖಾನಾಪೂರ ಇವರ ಮನವಿ ಪತ್ರ ದಿನಾಂಕ:13.7.2005.

7) ಸಹಾಯಕ ಕೃಷಿ ನಿರ್ದೇಶಕರು ಖಾನಾಪೂರ ಇವರ ಪತ್ರ ಸಂಖ್ಯೆ: ಸಕೃನಿಖಾ:ಸಿಬ್ಬಂದಿ:ಸಿಆರ್-56:04-05, ದಿನಾಂಕ: 10.8.2005.

8) ಇಲಾಖಾ ಆದೇಶ ಸಂಖ್ಯೆ ಸಿಬ್ಬಂದಿ-1 :ವಿಚಾರಣೆ-5:24:2004-05 ದಿನಾಂಕ:7-10-2005.

9) ಶ್ರೀ ಎಂ.ಜೆ. ಇಂದ್ರಕುಮಾರ ವಿಚಾರಣಾಧಿಕಾರಿಗಳು ಹಾಗೂ ನಿವೃತ್ತ ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ವಿಚಾರಣಾ ವರದಿ ದಿನಾಂಕ:21.4.2006.

10) ಇಲಾಖಾ 2ನೇ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ:ಸಿಬ್ಬಂದಿ-1:ವಿಚಾರಣೆ-5:24:2004-05, ದಿನಾಂಕ:12-6-2006.

11) ಸಹಾಯಕ ಕೃಷಿ ನಿರ್ದೇಶಕರು, ಖಾನಾಪೂರ ಇವರ ಪತ್ರ ಸಂಖ್ಯೆ:ಸಕೃನಿಖಾ;ಸಿಬ್ಬಂದಿ:ಕೃಸ:ಕಾಕೇನೋ:ಆಯ್.ಎಂ.ದೇ:06-07, ದಿನಾಂಕ:7-7-2006.

12) ಇಲಾಖಾ ಪತ್ರ ಸಂಖ್ಯೆ: ಸಿಬ್ಬಂದಿ-1 :ವಿಚಾರಣೆ-5:24:2004-05 ದಿನಾಂಕ:7-12-2005.

13) ಸಹಾಯಕ ಕೃಷಿ ನಿರ್ದೇಶಕರು, ಖಾನಾಪೂರ ಇವರ ಪತ್ರ ಸಂಖ್ಯೆ: ಸಕೃನಿಖಾ:ಸಿಬ್ಬಂದಿ:ಸಿಆರ್-4:05-06, ದಿನಾಂಕ:22-12-2005.

14) ಇಲಾಖಾ ಆದೇಶ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-5:24:04-05 ದಿನಾಂಕ:18-1-2006.

15) ಶ್ರೀ ಎಂ.ಜೆ.ಇಂದ್ರಕುಮಾರ್, ವಿಚಾರಣಾಧಿಕಾರಿಗಳು ಹಾಗೂ ನಿವೃತ್ತ ರಿಜಿಸ್ಟ್ರಾರ್, ಬೆಂಗಳೂರು ಇವರ ಹೇಳಿಕೆ ದಿನಾಂಕ:19-1-2006.

16) ಇಲಾಖಾ ಆದೇಶ ಸಂಖ್ಯೆ:ಸಿಬ್ಬಂದಿ-1:ವಿಚಾರಣೆ-5:24:2004-05. ದಿನಾಂಕ:15.7.2006.

17) ಸಹಾಯಕ ಕೃಷಿ ನಿರ್ದೇಶಕರು, ಖಾನಾಪೂರ ಇವರ ಪತ್ರ ಸಂಖ್ಯೆ: ಸಕೃನಿಖಾ:ಸಿಬ್ಬಂದಿ:ಆಯ್.ಎಂ.ದೇ:ಶಿಸ್ತು ಕ್ರ:06-07, ದಿನಾಂಕ:26-7-2006.

18) ಶ್ರೀ ಎಸ್. ಅನಂತಮೂರ್ತಿ, ವಿಚಾರಣಾಧಿಕಾರಿಗಳು ಹಾಗೂ ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರ ವಿಚಾರಣಾ ವರದಿ ದಿನಾಂಕ:13.11.2006.

19) ಇಲಾಖಾ 2ನೇ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-5:24:2004-05, ದಿನಾಂಕ:7-12-2006.

20) ಸಹಾಯಕ ಕೃಷಿ ನಿರ್ದೇಶಕರು, ಖಾನಾಪೂರ ಇವರ ಪತ್ರ ಸಂಖ್ಯೆ:ಸಕೃನಿಖಾ:ಸಿಬ್ಬಂದಿ ಐಎಂದೇ:ಕೃಸ:ಪಾವತಿ:414:06-07, ದಿನಾಂಕ:20.12.2006.

**ಪ್ರಸ್ತಾವನೆ :**

ಶ್ರೀ ಐ.ಎಂ. ದೇವಲಾಪೂರ, ಕೃಷಿ ಸಹಾಯಕ, ಬೀಡಿ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಖಾನಾಪೂರ ಇವರು ಮಲಪ್ರಭಾ ಗ್ರಾಮೀಣ ಬ್ಯಾಂಕ್, ಬೆಳಗಾವಿ ಶಾಖೆಯಲ್ಲಿ ಮತ್ತು ಶ್ರೀ ಜಗದ್ಗುರು ರೇಣುಕಾಚಾರ್ಯ ಕೋ-ಆಫ್ ಕ್ರೆಡಿಟ್ ಸೊಸಾಯಿಟಿ ಲಿಮಿಟೆಡ್ ಶ್ರೀನಗರ, ಬೆಳಗಾವಿ ಇವರಲ್ಲಿ ಸಾಲ ಪಡೆಯುವ ಸಲುವಾಗಿ ವೇತನ ಬಟವಾಡೆ ಅಧಿಕಾರಿಗಳ ಮುಚ್ಚಳಿಕೆ ಸಹಿತ ವೇತನ ಪ್ರಮಾಣಪತ್ರಕ್ಕೆ ಸಹಾಯಕ ಕೃಷಿ ನಿರ್ದೇಶಕರು, ಖಾನಾಪೂರ ಇವರ ಪೋರ್ಜರಿ ಸಹಿ ಮಾಡಿರುತ್ತಾರೆ ಮತ್ತು ಸಹಾಯಕ ಕೃಷಿ ನಿರ್ದೇಶಕರ ಪದನಾಮದ ಮೊಹರನ್ನು (ಸೀಲು) ದುರುಪಯೋಗ ಪಡಿಸಿಕೊಂಡಿರುತ್ತಾರೆ ಹಾಗೂ ಶ್ರೀ ಜಗದ್ಗುರು ರೇಣುಕಾಚಾರ್ಯ ಕೋ-ಆಫ್ ಕ್ರೆಡಿಟ್ ಸೊಸಾಯಿಟಿ ಲಿಮಿಟೆಡ್, ಶ್ರೀನಗರ, ಬೆಳಗಾವಿ, ಇವರಲ್ಲಿ ರೂ. 75000-00 ಗಳ ಸಾಲ ಪಡೆಯುವ ಸಲುವಾಗಿ ಸಹಾಯಕ ಕೃಷಿ ನಿರ್ದೇಶಕರು, ಖಾನಾಪೂರ ರವರುಗಳಾದ ಶ್ರೀ ಎಸ್.ಕೆ. ಚನ್ನಾಳ ಹಾಗೂ ಶ್ರೀ ಕೆ.ಎಂ. ಸೋಮಸುಂದ್ರ ಇವರುಗಳ ಸಹಿಯನ್ನು ಪೋರ್ಜರಿ ಸಹಿ ಮಾಡಿರುವುದನ್ನು ಹಾಗೂ ಕಛೇರಿ ಮೊಹರು (ಸೀಲು) ಗಳನ್ನು ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ಸದರಿ ನೌಕರರ ಮೇಲೆ ಓದಲಾದ ಕ್ರ.ಸಂ. (1)ರಲ್ಲಿ ಜಂಟಿ ಕೃಷಿ ನಿರ್ದೇಶಕರು, ಬೆಳಗಾಂ ಇವರು ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಓದಲಾದ ಕ್ರ.ಸಂ. (2)ರ ಇಲಾಖಾ ಪತ್ರದಲ್ಲಿ ಶ್ರೀ ಕೆ.ಎಂ. ಸೋಮಸುಂದ್ರ, ಸಹಾಯಕ ಕೃಷಿ ನಿರ್ದೇಶಕರು ಇವರ ಮಾದರಿ ಸಹಿಯನ್ನು ಪಡೆದು ಕೂಡಲೇ ಒದಗಿಸಲು ಸೂಚಿಸಲಾಯಿತು. ಓದಲಾದ ಕ್ರ.ಸಂ. (3) ರಲ್ಲಿ ಜಂಟಿ ಕೃಷಿ ನಿರ್ದೇಶಕರು, ಬೆಳಗಾಂ ಇವರು ಶ್ರೀ ಎಸ್.ಕೆ. ಚನ್ನಾಳ ಮತ್ತು ಶ್ರೀ ಕೆ.ಎಂ. ಸೋಮಸುಂದ್ರ, ಸಹಾಯಕ ಕೃಷಿ ನಿರ್ದೇಶಕರು ಇವರುಗಳ ಮಾದರಿ ಸಹಿಗಳುಳ್ಳ ಪಟ್ಟಿಯನ್ನು ಇಲಾಖೆಗೆ ಸಲ್ಲಿಸಿರುತ್ತಾರೆ.

ಓದಲಾದ ಕ್ರ.ಸಂ. (4) ರಲ್ಲಿ ಶ್ರೀ ಐ.ಎಂ. ದೇವಲಾಪೂರ, ಕೃಷಿ ಸಹಾಯಕ ಇವರಿಗೆ ಇಲಾಖೆಯಿಂದ ಅನುಬಂಧ-1 ರಿಂದ 4 ರವರೆಗಿನ ದೋಷಾರೋಪಣಾ ಪಟ್ಟಿಯನ್ನು ಜಾರಿಮಾಡಲಾಯಿತು. ಜಾರಿ ಮಾಡಲಾದ ದೋಷಾರೋಪಣಾ ಪಟ್ಟಿಯನ್ನು ಓದಲಾದ ಕ್ರ.ಸಂ. (5) ರಲ್ಲಿ ನೌಕರರಿಗೆ ದಿನಾಂಕ:25.6.2005 ರಂದು ಜಾರಿ ಮಾಡಿ ಸ್ವೀಕೃತಿಯನ್ನು ಇಲಾಖೆಗೆ ಸಲ್ಲಿಸಿರುತ್ತಾರೆ. ಓದಲಾದ ಕ್ರ.ಸಂ. (6)ರಲ್ಲಿ ಶ್ರೀ ಐ.ಎಂ. ದೇವಲಾಪೂರ, ಕೃಷಿ ಸಹಾಯಕ ಇವರು ಮನವಿ ಸಲ್ಲಿಸಿ ಅನುಬಂಧ-1 ರಿಂದ 4 ರವರೆಗಿನ ದೋಷಾರೋಪಣಾ ಪಟ್ಟಿಗೆ ಉತ್ತರ ಕೊಡಲು ನೀಡಲಾಗಿದ್ದ ಕಾಲಾವಕಾಶ ಮುಗಿದಿದ್ದು ಇನ್ನೊಂದು ವಾರ ಹೆಚ್ಚಿನ ಕಾಲಾವಕಾಶ ಕೊಡಬೇಕೆಂದು ವಿನಂತಿಸಿದ್ದರು. ಅವರ ವಿನಂತಿ ಮೇರೆಗೆ ಅವರು ಕೋರಿದ್ದ ಕಾಲಾವಕಾಶಕ್ಕಿಂತ ಹೆಚ್ಚಿನ ದಿನಗಳು ಲಿಖಿತ ಹೇಳಿಕೆಗಾಗಿ ನಿರೀಕ್ಷಿಸಲಾಯಿತು. ಓದಲಾದ ಕ್ರ.ಸಂ (7)ರಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಖಾನಾಪೂರ ಇವರು ದಿನಾಂಕ:10.8.2005 ರವರೆವಿಗೂ ಯಾವುದೇ ಉತ್ತರವನ್ನು ನೌಕರರು ಸಲ್ಲಿಸಿರುವುದಿಲ್ಲ ಹಾಗೂ ಕೇಂದ್ರ ಕಛೇರಿಗೆ ನೇರವಾಗಿ ಉತ್ತರ ಸಲ್ಲಿಸಿರುವ ಬಗ್ಗೆ ಅವರ ಕಛೇರಿಗೆ ವರದಿ ಮಾಡಿರುವುದಿಲ್ಲವೆಂದು ತಿಳಿಸಿರುತ್ತಾರೆ. ನಂತರ ಇದುವರೆವಿಗೂ ನೌಕರರು ಲಿಖಿತ ಹೇಳಿಕೆಯನ್ನು ಸಲ್ಲಿಸಿಲ್ಲವಾದ್ದರಿಂದ ಪ್ರಕರಣದಲ್ಲಿನ ಸತ್ಯಾಸತ್ಯತೆಯನ್ನು ಕಂಡುಹಿಡಿಯುವ ಸಲುವಾಗಿ ಓದಲಾದ ಕ್ರ.ಸಂ. (8)ರಲ್ಲಿ ಶ್ರೀ ಎಂ.ಜೆ. ಇಂದ್ರಕುಮಾರ್, ನಿವೃತ್ತ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಆಡಳಿತಾಧಿಕಾರಿಗಳು ಜಂಟಿ ಕೃಷಿ ನಿರ್ದೇಶಕರ ಕಛೇರಿ, ಬೆಳಗಾಂ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಸದರಿ ಪ್ರಕರಣದ ವಿಚಾರಣೆಯನ್ನು ಸಿಸಿಎ ನಿಯಮ 11ರ ಅಡಿಯಲ್ಲಿನ ನಿಬಂಧನೆಗಳಿಗನುಸಾರವಾಗಿ ನಡೆಸಿ ವಿಚಾರಣಾ ವರದಿಯನ್ನು ಪೂರ್ಣ ದಾಖಲಾತಿಗಳೊಂದಿಗೆ ಸಲ್ಲಿಸಲು ಆದೇಶಿಸಲಾಗಿತ್ತು.

ಓದಲಾದ ಕ್ರ.ಸಂ (9)ರಲ್ಲಿ ವಿಚಾರಣಾಧಿಕಾರಿಗಳಾದ ಶ್ರೀ ಎಂ.ಜೆ. ಇಂದ್ರಕುಮಾರ, ನಿವೃತ್ತ ರಿಜಿಸ್ಟ್ರಾರ್ ಇವರು ಪ್ರಕರಣದ ವಿಚಾರಣೆಯನ್ನು ನಿಯಮಾನುಸಾರ ಕೈಗೊಂಡು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಶ್ರೀ ಐ.ಎಂ. ದೇವಲಾಪೂರ, ಕೃಷಿ ಸಹಾಯಕ ಇವರ ವಿರುದ್ಧ ಮಾಡಲಾದ ಆರೋಪ-1 ಮತ್ತು 2 ಆರೋಪಗಳಾದ ಅಂದರೆ ಇವರು ಮಲಪ್ರಭಾ ಗ್ರಾಮೀಣ ಬ್ಯಾಂಕ್, ಬೆಳಗಾವಿ ಶಾಖೆ ಮತ್ತು ಶ್ರೀ ಜಗದ್ಗುರು ರೇಣುಕಾಚಾರ್ಯ ಕೋ-ಆಫ್ ಕ್ರೆಡಿಟ್ ಸೊಸಾಯಿಟಿ ಲಿಮಿಟೆಡ್, ಶ್ರೀನಗರ, ಬೆಳಗಾವಿ ಇವರಲ್ಲಿ ಸಾಲ ಪಡೆಯುವ ಸಲುವಾಗಿ ವೇತನ ಬಟವಾಡೆ ಅಧಿಕಾರಿಗಳ ಸಹಿಯನ್ನು ಪೋರ್ಜರಿ ಸಹಿ ಮಾಡಿದ್ದ ಹಾಗೂ ಕಛೇರಿ ಮೊಹರುಗಳನ್ನು (ಸೀಲು) ದುರುಪಯೋಗಪಡಿಸಿಕೊಂಡಿರುವುದು ವಿಚಾರಣಾ ವರದಿಯಲ್ಲಿ ಸಾಬೀತಾಗಿ ದೃಢಪಟ್ಟಿರುತ್ತದೆ. ಸದರಿ ನೌಕರರ ವಿರುದ್ಧ ಮಾಡಲಾದ ಆರೋಪ-1 ಮತ್ತು 2 ಗಳು ವಿಚಾರಣಾ ವರದಿಯಲ್ಲಿ ಸಾಕ್ಷಿ, ದಾಖಲೆಗಳ ಆಧಾರದ ಸಹಿತ ಸಾಬೀತಾಗಿರುವ ಹಿನ್ನಲೆಯಲ್ಲಿ ಸದರಿ ನೌಕರರಿಗೆ ಓದಲಾದ ಕ್ರ.ಸಂ (10) ರಲ್ಲಿ ಇಲಾಖೆಯಿಂದ 2ನೇ ಕಾರಣ ಕೇಳುವ ಸೂಚನಾ ಪತ್ರದೊಂದಿಗೆ ವಿಚಾರಣಾ ವರದಿಯ ಪ್ರತಿಯನ್ನು ಜಾರಿ ಮಾಡಲಾಯಿತು. ಜಾರಿ ಮಾಡಲಾದ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ಹಾಗೂ ವಿಚಾರಣಾ ವರದಿಯ ಪ್ರತಿಯನ್ನು ನೌಕರರು ಸ್ವೀಕರಿಸಿರುವುದಕ್ಕೆ ಸ್ವೀಕೃತಿಯನ್ನು ಓದಲಾದ ಕ್ರ.ಸಂ. (11)ರಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಖಾನಾಪೂರ ಇವರು ಇಲಾಖೆಗೆ ಸಲ್ಲಿಸಿರುತ್ತಾರೆ.

ಶ್ರೀ ಐ.ಎಂ. ದೇವಲಾಪೂರ, ಕೃಷಿ ಸಹಾಯಕ ಬೀಡಿ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಖಾನಾಪೂರ ಇವರು ಮಲಪ್ರಭಾ ಗ್ರಾಮೀಣ ಬ್ಯಾಂಕ್, ಗೋವಾವೇಸ್ ಶಾಖೆ, ಬೆಳಗಾಂ ರವರಲ್ಲಿ ರೂ. 60,000-00 ಗಳ ಸಾಲ ಪಡೆಯುವ ಸಲುವಾಗಿ ವೇತನ ಬಟವಾಡೆ ಅಧಿಕಾರಿಗಳ ನಕಲಿ ಮುಚ್ಚಳಿಕೆ ಸಹಿತ ನಕಲಿ ವೇತನ ಪ್ರಮಾಣ ಪತ್ರ ದಿನಾಂಕ:29.7.2004ಕ್ಕೆ

ಹಿಂದಿನ ಸಹಾಯಕ ಕೃಷಿ ನಿರ್ದೇಶಕರು, ಖಾನಾಪೂರ ರವರಾದ ಶ್ರೀ ಕೆ.ಎಂ ಸೋಮಸುಂದ್ರ ಇವರ ಸಹಿಯನ್ನು ಪೋರ್ಜರಿ ಮಾಡಿ ಸಹಾಯಕ ಕೃಷಿ ನಿರ್ದೇಶಕರ ಪದನಾಮದ ಮೊಹರುಗಳನ್ನು (ಸೀಲು)ಸಹ ಅನಧಿಕೃತವಾಗಿ ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ಇಲಾಖೆಯನ್ನು ಹಾಗೂ ಬ್ಯಾಂಕ್‌ನ್ನು ವಂಚಿಸಿರುವ ಹಿನ್ನಲೆಯಲ್ಲಿ ಓದಲಾದ ಕ್ರ.ಸಂ(12) ರಲ್ಲಿ ನೌಕರರಿಗೆ ಅನುಬಂಧ-1 ರಿಂದ 4 ರವರೆಗಿನ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಲಾಯಿತು. ಜಾರಿ ಮಾಡಲಾದ ದೋಷಾರೋಪಣಾ ಪಟ್ಟಿಯನ್ನು ನೌಕರರು ದಿನಾಂಕ:21-12-2005 ರಲ್ಲಿ ಸ್ವೀಕರಿಸಿರುವುದಕ್ಕೆ ಸ್ವೀಕೃತಿಯನ್ನು ಓದಲಾದ ಕ್ರ.ಸಂ. (13) ರಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಖಾನಾಪೂರ ರವರು ಇಲಾಖೆಗೆ ಸಲ್ಲಿಸಿರುತ್ತಾರೆ. ಸದರಿ ನೌಕರರು ಹೆಚ್ಚುವರಿ ದೋಷಾರೋಪಣಾ ಪಟ್ಟಿಗೆ ಲಿಖಿತ ಹೇಳಿಕೆಯನ್ನು ನಿಗದಿತ ಅವಧಿಯಲ್ಲಿ ಇಲಾಖೆಗೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಹೆಚ್ಚುವರಿ ದೋಷಾರೋಪಣಾ ಪಟ್ಟಿಯಲ್ಲಿನ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಹಿಡಿಯುವ ಸಲುವಾಗಿ ಈಗಾಗಲೇ ನೇಮಿಸಲಾಗಿದ್ದ ವಿಚಾರಣಾಧಿಕಾರಿಯವರಿಗೆ ಹೆಚ್ಚುವರಿ ದೋಷಾರೋಪಣಾ ಪಟ್ಟಿ ನೀಡಿ ವಿಚಾರಣೆ ನಡೆಸಲು ಓದಲಾದ ಕ್ರ.ಸಂ. (14) ರಲ್ಲಿ ತಿಳಿಸಲಾಯಿತು. ಓದಲಾದ ಕ್ರ.ಸಂ. (15)ರಲ್ಲಿ ಶ್ರೀ ಎಂ.ಜೆ. ಇಂದ್ರ ಕುಮಾರ್ ವಿಚಾರಣಾಧಿಕಾರಿಗಳು ಇವರು ನೀಡಿರುವ ಹೇಳಿಕೆಯಲ್ಲಿ ಹೆಚ್ಚುವರಿ ದೋಷಾರೋಪಣಾ ಪಟ್ಟಿಯನ್ನು ಪ್ರತ್ಯೇಕವಾದ ಪ್ರಕರಣವಾಗಿ ಪರಿಗಣಿಸಬೇಕಾಗುತ್ತದೆ. ಇದನ್ನು ಹಿಂದಿನ ಪ್ರಕರಣಕ್ಕೆ ಸೇರಿಸಿ ವಿಚಾರಣೆ ನಡೆಸಲು ಸಾಧ್ಯವಿಲ್ಲವೆಂದು ತಿಳಿಸಿರುತ್ತಾರೆ. ಶ್ರೀ ಐ.ಎಂ. ದೇವಲಾಪೂರ ಕೃಷಿ ಸಹಾಯಕ ಇವರು ದಿನಾಂಕ:21.12.2005 ರಲ್ಲಿ ದೋಷಾರೋಪಣಾ ಪಟ್ಟಿಯನ್ನು ಸ್ವೀಕರಿಸಿ ಇದುವರೆವಿಗೂ ಅದರ ಲಿಖಿತ ಹೇಳಿಕೆಯನ್ನು ಸಲ್ಲಿಸದೇ ಇರುವ ಕಾರಣ ಪ್ರಕರಣದಲ್ಲಿನ ಸತ್ಯಾಸತ್ಯತೆಯನ್ನು ಕಂಡುಹಿಡಿಯಲು ಸಿಸಿಎ ನಿಯಮ 11 ರೀತ್ಯಾ ವಿಚಾರಣೆ ನಡೆಸಲು 18-1-2006 ರಲ್ಲಿ ನೇಮಕ ಮಾಡಿದ ವಿಚಾರಣಾಧಿಕಾರಿಗೆ ಬದಲಾಗಿ ಬೇರೆ ವಿಚಾರಣಾಧಿಕಾರಿಗಳನ್ನು ಅಂದರೆ ಶ್ರೀ ಎಸ್. ಅನಂತಮೂರ್ತಿ, ವಿಚಾರಣಾಧಿಕಾರಿಗಳು ಹಾಗೂ ನಿವೃತ್ತ ನ್ಯಾಯಾಧೀಶರು ಇವರನ್ನು ಓದಲಾದ ಕ್ರ.ಸಂ. (16) ವಿಚಾರಣಾಧಿಕಾರಿಯಾಗಿ ನೇಮಿಸಿ ಈ ಹಿಂದೆ ದಿನಾಂಕ:18-1-2006ರಲ್ಲಿ ನೇಮಿಸಿದ್ದ ಮಂಡನಾಧಿಕಾರಿಗಳು, ಹಾಗೂ ಆಡಳಿತಾಧಿಕಾರಿಗಳು, ಜಂಟಿ ಕೃಷಿ ನಿರ್ದೇಶಕರ ಕಛೇರಿ, ಬೆಳಗಾಂ ಇವರನ್ನು ಮಂಡನಾಧಿಕಾರಿಯನ್ನಾಗಿ ಮುಂದುವರೆಸಿ ಆದೇಶಿಸಿದೆ. ಓದಲಾದ ಕ್ರ.ಸಂ. (17) ರಲ್ಲಿ ನೌಕರರಿಗೆ ಇಲಾಖಾ ಆದೇಶ ದಿನಾಂಕ:15.7.2006ನ್ನು ಜಾರಿ ಮಾಡಿ ಸ್ವೀಕೃತಿಯನ್ನು ಇಲಾಖೆಗೆ ಸಲ್ಲಿಸಿರುತ್ತಾರೆ. ಓದಲಾದ ಕ್ರ.ಸಂ. (18)ರಲ್ಲಿ ವಿಚಾರಣಾಧಿಕಾರಿಗಳಾದ ಶ್ರೀ ಎಸ್. ಅನಂತಮೂರ್ತಿ, ವಿಚಾರಣಾಧಿಕಾರಿಗಳು ಹಾಗೂ ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರು ಪ್ರಕರಣದ ವಿಚಾರಣೆಯನ್ನು ನಿಯಮಾನುಸಾರ ಕೈಗೊಂಡು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಶ್ರೀ ಐ.ಎಂ. ದೇವಲಾಪುರ, ಕೃಷಿ ಸಹಾಯಕ ಇವರ ವಿರುದ್ಧ ಮಾಡಲಾದ ಆರೋಪವು ಅಂದರೆ ಸದರಿ ನೌಕರರು ಮಲಪ್ರಭಾ ಗ್ರಾಮೀಣ ಬ್ಯಾಂಕ್, ಗೋವಾವೇಸ್ ಶಾಖೆ ಬೆಳಗಾಂ ರವರಲ್ಲಿ ರೂ. 60,000-00 ಗಳ ಸಾಲ ಪಡೆಯುವ ಸಲುವಾಗಿ ವೇತನ ಬಟವಾಡೆ ಅಧಿಕಾರಿಗಳ ನಕಲಿ ಮುಚ್ಚಳಿಕೆ ಸಹಿತ ನಕಲಿ ವೇತನ ಪ್ರಮಾಣ ಪತ್ರ ದಿನಾಂಕ:29-7-2004ಕ್ಕೆ ಹಿಂದಿನ ಸಹಾಯಕ ಕೃಷಿ ನಿರ್ದೇಶಕರು, ಖಾನಾಪೂರ ರವರಾದ ಶ್ರೀ ಕೆ.ಎಂ. ಸೋಮಸುಂದ್ರ ಇವರ ಸಹಿಯನ್ನು ಪೋರ್ಜರಿ ಸಹಿ ಮಾಡಿರುತ್ತಾರೆಂದು ಹಾಗೂ ಸಹಾಯಕ ಕೃಷಿ ನಿರ್ದೇಶಕರ ಪದನಾಮದ ಮೊಹರುಗಳನ್ನು (ಸೀಲು) ಸಹ ಅನಧಿಕೃತವಾಗಿ ದುರುಪಯೋಗಪಡಿಸಿಕೊಂಡಿರುವುದು ವಿಚಾರಣಾ ವರದಿಯಲ್ಲಿ ಸಂಪೂರ್ಣವಾಗಿ ರುಜುವಾಗಿರುತ್ತದೆ. ಆದ್ದರಿಂದ ಇವರ ವಿರುದ್ಧ ಮಾಡಲಾದ ಆರೋಪವು ಸಾಕ್ಷಿ ದಾಖಲೆಗಳ ಹಾಗೂ ಆರೋಪಿತ ನೌಕರರು ವಿಚಾರಣಾಧಿಕಾರಿಗಳ ಮುಂದೆ ಪ್ರತ್ಯಕ್ಷವಾಗಿ ಖುದ್ದಾಗಿ ಹೇಳಿಕೆ ನೀಡಿರುವ ಆಧಾರಗಳ ಮೇಲೆ ಸಂಪೂರ್ಣವಾಗಿ ರುಜುವಾತಾಗಿರುವ ಹಿನ್ನಲೆಯಲ್ಲಿ ಸದರಿ ನೌಕರರಿಗೆ ಓದಲಾದ ಕ್ರ.ಸಂ(19) ರಲ್ಲಿ ಇಲಾಖೆಯಿಂದ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ಹಾಗೂ ವಿಚಾರಣಾ ವರದಿಯ ಪ್ರತಿಯನ್ನು ಜಾರಿ ಮಾಡಲಾಯಿತು. ಜಾರಿ ಮಾಡಲಾದ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ಹಾಗೂ ವಿಚಾರಣಾ ವರದಿಯ ಪ್ರತಿಯನ್ನು ನೌಕರರು ದಿನಾಂಕ:18-12-2006 ರಂದು ಸ್ವೀಕರಿಸಿರುವುದಕ್ಕೆ ಸ್ವೀಕೃತಿಯನ್ನು ಓದಲಾದ ಕ್ರ.ಸಂ (20) ರಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಖಾನಾಪೂರ ಇವರು ಇಲಾಖೆಗೆ ಸಲ್ಲಿಸಿರುತ್ತಾರೆ. ಸದರಿ ನೌಕರರು ಓದಲಾದ ಕ್ರ.ಸಂ. (9), (10) ರಲ್ಲಿನ ಹಾಗೂ ಓದಲಾದ ಕ್ರ.ಸಂ. (18), (19) ರಲ್ಲಿನ ವಿಚಾರಣಾ ವರದಿಯ ಪ್ರತಿಯನ್ನು ಹಾಗೂ 2ನೇ ಕಾರಣ ಕೇಳುವ ಸೂಚನಾ ಪತ್ರಗಳನ್ನು ಓದಲಾದ ಕ್ರ.ಸಂ (11) ಮತ್ತು ಓದಲಾದ ಕ್ರ.ಸಂ (20) ರಲ್ಲಿ ನೌಕರರು ಸ್ವೀಕರಿಸಿರುವುದಕ್ಕೆ ಇಲಾಖೆಗೆ ಸ್ವೀಕೃತಿ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯ ಪ್ರತಿಯನ್ನು ಹಾಗೂ 2ನೇ ಕಾರಣ ಕೇಳುವ ಸೂಚನಾ ಪತ್ರಗಳನ್ನು ಸ್ವೀಕರಿಸಿರುವ ಸದರಿ ನೌಕರರು ಇದುವರೆಗೂ ಇಲಾಖೆಗೆ ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಇವರ ಲಿಖಿತ ಹೇಳಿಕೆಗಾಗಿ ಸಾಕಷ್ಟು ಕಾಲ ನಿರೀಕ್ಷಿಸಲಾಯಿತು. ಆದರೂ ಅವರಿಂದ ವಿಚಾರಣಾ ವರದಿಯ ಮೇಲೆ ಯಾವುದೇ ಲಿಖಿತ ಹೇಳಿಕೆಯನ್ನು ಸಲ್ಲಿಸದಿರುವುದರಿಂದ ಓದಲಾದ ಕ್ರ.ಸಂ (9) ಮತ್ತು (18) ರಲ್ಲಿನ ವಿಚಾರಣಾ ವರದಿಯಲ್ಲಿ ಇವರ ವಿರುದ್ಧದ ಆರೋಪಗಳು ಸಂಪೂರ್ಣವಾಗಿ ಸಾಬೀತಾಗಿರುವುದರಿಂದ ಸದರಿ ವಿಚಾರಣಾ ವರದಿಗಳನ್ನು ಒಪ್ಪಿಕೊಂಡು ನೌಕರರನ್ನು ಆರೋಪಿ ಎಂದು ತೀರ್ಮಾನಿಸಿ ದಂಡನೆ ವಿಧಿಸಲು ನಿರ್ಧರಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-5:24:2004-05 ದಿನಾಂಕ: 5ನೇ ಏಪ್ರಿಲ್ 2007**

ಈ ಕೆಳಗೆ ಸಹಿ ಮಾಡಿರುವ ಡಾ: ಎಂ. ಮಲ್ಲಪ್ಪ ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳನ್ನು ಬೆಂಗಳೂರು ಆದ ನಾನು ಈ ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಕಾರಣಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಐ.ಎಂ ದೇವಲಾಪೂರ, ಕೃಷಿ ಸಹಾಯಕ ಬೀಡಿ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಖಾನಾಪೂರ ಇವರ ವಿರುದ್ಧದ ಆರೋಪಗಳಾದ (1) ಮಲಪ್ರಭಾ ಗ್ರಾಮೀಣ ಬ್ಯಾಂಕ್, ಬೆಳಗಾವಿ (2) ಶ್ರೀ ಜಗದ್ಗುರು ರೇಣುಕಾಚಾರ್ಯ ಕೋ-ಆಫ್ ಕ್ರೆಡಿಟ್

ಸೊಸಾಯಿಟಿ ಲಿಮಿಟೆಡ್, ಶ್ರೀನಗರ ಬೆಳಗಾವಿ (3) ಮಲಪ್ರಭಾ ಗ್ರಾಮೀಣ ಬ್ಯಾಂಕ್ ಗೋವಾವೇಸ್ ಶಾಖೆ, ಬೆಳಗಾಂ ಇವರುಗಳಲ್ಲಿ ಸಾಲ ಪಡೆಯುವ ಸಲುವಾಗಿ ವೇತನ ಬಟವಾಡೆ ಅಧಿಕಾರಿಗಳ ಸಹಿಯನ್ನು (ಸಹಾಯಕ ಕೃಷಿ ನಿರ್ದೇಶಕರು ಖಾನಾಪೂರ ರವರ ಸಹಿಯನ್ನು) ಪೋರ್ಜರಿ ಸಹಿ ಮಾಡಿ ಕಛೇರಿ ಮೊಹರುಗಳನ್ನು ಅನಧಿಕೃತವಾಗಿ ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ಮಾಡಲಾಗಿದ್ದ ಎಲ್ಲಾ ಆರೋಪಗಳು ಸಂಪೂರ್ಣವಾಗಿ ಸಾಬೀತಾಗಿರುವುದರಿಂದ ಶ್ರೀ ಐ.ಎಂ. ದೇವಲಾಪೂರ, ಕೃಷಿ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಖಾನಾಪೂರ ಇವರನ್ನು ಆರೋಪಿ ಎಂದು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (vi) ರ ಪ್ರಕಾರ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ "ಕಡ್ಡಾಯ ನಿವೃತ್ತಿ" ಗೊಳಿಸಿ ಆದೇಶಿಸಿರುತ್ತೇನೆ.

**ಡಾ: ಎಂ. ಮಲ್ಲಪ್ಪ**

ಪಿ.ಆರ್. 533 ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಸಾಗರ ಉಪ ವಿಭಾಗ, ಸಾಗರ**

**ಡಿಕ್ರಿ ಆದೇಶ ಸಂಖ್ಯೆ:ಅನಿ (ಬ.ಮಾ) ಡಿಡಿಎಸ್ ಡಿ7/3908/2004–05 ಅಮಲ್ಜಾರಿ ಸಂಖ್ಯೆ:4/06–07**

**ಅರ್ಜಿದಾರರು :** ವ್ಯವಸ್ಥಾಪಕ ನಿರ್ದೇಶಕರು,
ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘ (ನಿ), ಶಿವಮೊಗ್ಗ

**ಪ್ರತಿವಾದಿಗಳು :** 1) ಮೆ: ಕೆ. ಅಶೋಕ, ಅಡಿಕೆ ವ್ಯಾಪಾರಿಗಳು,
ಎಸ್.ಬಿ.ಎಂ. ರಸ್ತೆ, ಸಾಗರ, ಶಿವಮೊಗ್ಗ ಜಿಲ್ಲೆ
ಇದನ್ನು ಪ್ರತಿನಿಧಿಸುವವರು ಅದರ ಮಾಲೀಕರಾದ
ಶ್ರೀ ಕೆ.ಅಶೋಕ ಬಿನ್ ಕೆ.ಎನ್. ಗೋವಿಂದ ಭಟ್ಟ
2) ಶ್ರೀ ಕೆ .ಅಶೋಕ ಬಿನ್ ಕೆ.ಎನ್. ಗೋವಿಂದ ಭಟ್ಟ
ಮಾಲೀಕರು ಮೆ: ಕೆ. ಅಶೋಕ, ಅಡಿಕೆ ವ್ಯಾಪಾರಿಗಳು,
ಎಸ್.ಬಿ.ಎಂ. ರಸ್ತೆ, ಸಾಗರ, ಶಿವಮೊಗ್ಗ ಜಿಲ್ಲೆ
3) ಶ್ರೀ ಕೆ. ವಿನಾಯಕ ಬಿನ್ ಕೆ.ಎಸ್. ಗೋವಿಂದಭಟ್ಟ
1ನೇ ಪ್ರತಿವಾದಿ ಸಂಸ್ಥೆಯ ವ್ಯವಹಾರಕ್ಕೆ ತಮ್ಮ ಸ್ಥಿರಾಸ್ತಿಯನ್ನು
ಭದ್ರತೆಗಾಗಿ ನೀಡಿದವರು.

**ವಿಷಯ :** ದಿನಾಂಕ:12.1.07 ರಂದು ಬಹಿರಂಗ ಹರಾಜಿನಲ್ಲಿ ಖರೀದಿಸಿದ ಆಸ್ತಿಯನ್ನು ಅರ್ಜಿದಾರರಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 101 (ಬಿ) ಮೇರೆಗೆ ವರ್ಗಾವಣೆ ಬಗ್ಗೆ.

**ಉಲ್ಲೇಖ :** 1) ಈ ಕಛೇರಿಯ ಇಪಿ ಆದೇಶ ನಂ. 4/06–07
2) ಮಾರಾಟಾಧಿಕಾರಿಗಳ ಪ್ರಸ್ತಾವನೆ ಕ್ರ.ಸಂ. ಮಾಮ್‌ಕೋಸ್, ಹರಾಜು ಸ್ಥಿರೀಕರಣ 04/06–:22.1.07
3) ಮಾರಾಟಾಧಿಕಾರಿಯವರ ಪತ್ರ ನಂ. ಮಾರಾಟಾಧಿಕಾರಿ, 5036/06–07 ದಿ:22.1.07

**ಪ್ರಸ್ತಾವನೆ:**

ಅರ್ಜಿದಾರರಾದ ವ್ಯವಸ್ಥಾಪಕ ನಿರ್ದೇಶಕರು, ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘ (ನಿ), ಶಿವಮೊಗ್ಗ ಇವರು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಹಾಗೂ ನಿಯಮಗಳು 1960 ರನ್ವಯ ಕಾರ್ಯನಿರ್ವಹಿಸುತ್ತಿದ್ದ ಈ ಸಂಘದ ಸಾಗರ ಹಾಗೂ ಹೊಸನಗರ ಶಾಖೆಗಳಲ್ಲಿ ನಡೆಸಿದ ವ್ಯವಹಾರದ ಬಾಬ್ತು ಪ್ರತಿವಾದಿ 1,2 ಮತ್ತು 3ನೇ ಯವರು ಕೊಡಲು ಬಾಕಿ ಇರುವ ಮೊಬಲಗನ್ನು ಮರು ಪಾವತಿ ಮಾಡದೇ ಇರುವ ಪ್ರಯುಕ್ತ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 70ರ ಅಡಿಯಲ್ಲಿ ದಾವೆಯನ್ನು ಹೂಡಿ ಪ್ರತಿವಾದಿಗಳ ವಿರುದ್ಧ ಆದೇಶ ಅ.ನಿ. (ಬ.ಮಾ) ಡಿ.ಡಿ.ಎಸ್. ಡಿ7 3908/2004–05 ದಿನಾಂಕ:18.3.06 ರ ಪ್ರಕಾರ ಡಿಕ್ರಿ ಪಡೆದು,. ನಿಯಮಾನುಸಾರ ವಸೂಲಿ ಕ್ರಮ ಕೈಗೊಂಡಿದ್ದಾರೆ. ಈ ಪ್ರಾಧಿಕಾರಕ್ಕೆ ಡಿಕ್ರಿಯ ಅಮಲ್ಜಾರಿ ಬಗ್ಗೆ.ಕಾಯ್ದೆ 1959 ಹಾಗೂ ನಿಯಮಗಳು 1960 ರ ರೀತ್ಯಾ ಅರ್ಜಿ ಸಲ್ಲಿಸಿ ಅಮಲ್ಜಾರಿ ದಾಖಲಿಸಿ ನಂತರವೂ ಬಾಕಿಯನ್ನು ಪ್ರತಿವಾದಿಗಳು ಸಂಘಕ್ಕೆ ಮರುಪಾವತಿ ಮಾಡದ ಪ್ರಯುಕ್ತ ಅರ್ಜಿದಾರರ ಸಂಘದ ಮಾರಾಟಾಧಿಕಾರಿಯವರಿಗೆ ನಿಯಮಾನುಸಾರ ವಸೂಲಿ ಕ್ರಮಕ್ಕಾಗಿ ಸೂಚಿಸಿ ಅಧಿಕಾರ ನೀಡಿ ಸಾಲ ವಸೂಲಿ ಮಾಡಲು ಆದೇಶಿಸಲಾಗಿತ್ತು.

ಸಂಘದ ಮಾರಾಟಾಧಿಕಾರಿಯವರು ನಿಯಮಾನುಸಾರ ವಸೂಲಿ ಕ್ರಮ ಜರುಗಿಸಿ ಅಂತಿಮವಾಗಿ ಡಿಕ್ರಿ ಸಂಘದ ಷೆಡ್ಯೂಲ್ ಆಸ್ತಿಯನ್ನು ದಿನಾಂಕ:12.1.07 ರಂದು ಬಹಿರಂಗ ಹರಾಜಿಗೆ ನಿಗಧಿಪಡಿಸಿದ್ದರು ಹಾಗೂ ಹರಾಜಿನ ದಿನಕ್ಕೆ ಮೂರು ದಿನ ಮುಂಚಿತವಾಗಿ ಹರಾಜು ನಡೆಯುವ ಸ್ಥಳದ ಪಟ್ಟಣದಲ್ಲಿ ಟಾಂ ಟಾಂ ಮೂಲಕ ಸತತವಾಗಿ ಪ್ರಚುರ ಪಡಿಸಲಾಗಿದೆ. ಬಹಿರಂಗ ಹರಾಜಿನ ಇಸ್ತಿಹಾರ್ ಪ್ರಕಟಣೆಯನ್ನು ಸಂಘದ ನಾಮಫಲಕ ಹಾಗೂ ಸಾರ್ವಜನಿಕ ಕಛೇರಿ ಸ್ಥಳಗಳಲ್ಲಿ ಪ್ರಕಟಿಸಲಾಗಿತ್ತು. ಆದರೆ ಬಿಡ್‌ದಾರರು ಈ ಹರಾಜಿನಲ್ಲಿ ಭಾಗವಹಿಸದೇ ಇದ್ದ ಪ್ರಯುಕ್ತ ಡಿಕ್ರಿ ಬಾಕಿದಾರರ ಸ್ಥಿರ ಸೊತ್ತುಗಳನ್ನು ಸಂಘ ಬರಬೇಕಾದ ಅಸಲು, ಬಡ್ಡಿ ಮತ್ತು ಸುಸ್ತಿ ಬಡ್ಡಿ ಇತರೆ ವೆಚ್ಚ ಸೇರಿ ರೂ. 53,88,163/– ಗಳನ್ನು ಮರುಪಾವತಿ ಮಾಡದಿದ್ದರಿಂದ ಸಂಘದ ಹೆಸರಿಗೆ ಸ್ಥಿರ ಸ್ವತ್ತುಗಳನ್ನು ವರ್ಗಾವಣೆ ಮಾಡಲು ಈ ಪ್ರಾಧಿಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುವುದನ್ನು ಪರಿಶೀಲಿಸಿದೆ. ಮಾರಾಟಾಧಿಕಾರಿಗಳು ಸಾಲಗಾರರಿಗೆ ಫಾರಂ. ನಂ. 2, 6 ಮತ್ತು ನಮೂನೆ 8 ಮತ್ತು 9 ನೋಟಿಸ್‌ಗಳನ್ನು

ಬಾಕಿದಾರರಿಗೆ ಜಾರಿ ಮಾಡಿ ಸಾರ್ವಜನಿಕ ಬಹಿರಂಗ ಹರಾಜಿಗೆ ತಂದಿದ್ದು ಬಿಡ್‌ದಾರರ ಅಭಾವದಿಂದ ಸದರಿ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101 (ಬಿ) ಪ್ರಕಾರ ಸಂಘದ ಹೆಸರಿಗೆ ಬಿಡ್ ನಿಲ್ಲಿಸಲು ತೀರ್ಮಾನಿಸಿ ನಡವಳಿಕೆಗಳನ್ನು ದಾಖಲಿಸಿರುತಾರೆ.

ಉಲ್ಲೇಖ (3) ರ ಪ್ರಕಾರ ನಿಯಮ 38 (ಎ) ಅನ್ವಯ ಈ ಬಗ್ಗೆ ಡಿಕ್ರಿ ಬಾಕಿದಾರರಿಗೆ ದಿ:22.1.07 ರಂದು ನೋಟೀಸು ನೀಡಿದ್ದು, ಸದರಿ ನೋಟಿಸನ್ನು ಪ್ರತಿವಾದಿಗಳು ಸ್ವೀಕರಿಸದೇ ವಾಪಾಸು ಬಂದಿರುತ್ತದೆ. ಡಿಕ್ರಿ ಮೊತ್ತವನ್ನು ಪಾವತಿ ಮಾಡದೇ ಇದ್ದುದರಿಂದ ಸ್ಥಿರಾಸ್ತಿಯು ವರ್ಗಾವಣೆ ಆದೇಶ ಕೋರಿದ ಪ್ರಸ್ತಾವನೆಯು ಸಹಕಾರ ಕಾಯ್ದೆ 1959ರ ಕಲಂ 101 (ಬಿ) ಹಾಗೂ ನಿಯಮ 38(ಎ) ಪ್ರಕಾರ ಸಮಂಜಸವಾಗಿದೆ ಎಂದು ಕಂಡುಬಂದಿದ್ದರಿಂದ ಡಿಕ್ರಿ ಬಾಕಿದಾರರ ಸ್ಥಿರಾಸ್ತಿಯನ್ನು ಅರ್ಜಿದಾರರ ಸಂಘದ ಹೆಸರಿಗೆ ವರ್ಗಾವಣೆ ಮಾಡಲು ಆದೇಶವನ್ನು ನೀಡಲಾಗಿದೆ.

**ಆದೇಶ**

**ಎ.ಆರ್. 25 ಇಪಿ 4/06–07, ದಿನಾಂಕ:26ನೇ ಮಾರ್ಚ್ 2007**

ವೆಂಕಟರಾವ್ ಕುಲಕರ್ಣಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ಆದ ನಾನು ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಕಾಯಿದೆ 1959, ಕಲಂ 101 (ಬಿ) ಅನ್ವಯ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಿ.ಎಂ.ಡಬ್ಲ್ಯೂ 69 ಸಿ.ಎಲ್.ಎಂ. 01 ದಿ:21.11.2001ರ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಮೆ: ಕೆ. ಅಶೋಕ, ಅಡಿಕೆ ವ್ಯಾಪಾರಿಗಳು, ಎಸ್.ಬಿ.ಎಂ. ರಸ್ತೆ ಸಾಗರ, ಶಿವಮೊಗ್ಗ ಜಿಲ್ಲೆ ಇದನ್ನು ಪ್ರತಿನಿಧಿಸುವವರು ಅದರ ಮಾಲೀಕರಾದ ಶ್ರೀ ಕೆ. ಅಶೋಕ ಬಿನ್ ಕೆ.ಎಸ್. ಗೋವಿಂದ ಭಟ್ಟ ಹಾಗೂ ಶ್ರೀ ಕೆ. ವಿನಾಯಕ ಬಿನ್ ಕೆ.ಎನ್ ಗೋವಿಂದ ಭಟ್, ಜೋಗ ರಸ್ತೆ, ಸಾಗರ ಇವರ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ರೂ. 53,88,163/– ಗಳಿಗೆ ಡಿಕ್ರಿ ಹೋಲ್ಡರ್ ಸಂಘದ ಹೆಸರಿಗೆ ಸ್ಥಿರಾಸ್ತಿಯ ಖಾತೆ ಮತ್ತು ಪಹಣೆಯ ವರ್ಗಾವಣೆಗೆ ಆದೇಶ ನೀಡಿರುತ್ತೇನೆ. ಕಾಯ್ದೆ ಅನ್ವಯ ನಿಗದಿತ ನಮೂನೆಯಲ್ಲಿನ ನಮೂನೆ 8 ರಂತೆ ಸ್ಥಿರಾ ಸ್ವತ್ತಿನ ವರ್ಗಾವಣೆ ಪ್ರಮಾಣ ಪತ್ರವನ್ನು ಅಲಾಯಿದ ನೀಡಿರುವುದನ್ನು ಈ ಆದೇಶಕ್ಕೆ ಲಗತ್ತಿಸಿದೆ.

**ಷೆಡ್ಯೂಲ್ ಸ್ಥಿರ ಸ್ವತ್ತಿನ ವಿವರ**

| ಕ್ರ. ಸಂ | ಸ್ಥಿರಾಸ್ತಿ ಇರುವ ಸ್ಥಳ | ಸರ್ವೆ ನಂ | ವಿಸ್ತೀರ್ಣ | ತರಹೆ | ಡಿಕ್ರಿ ಹೊಂದಿದ ಹಕ್ಕಿನ ಸ್ವಭಾವ |
|---|---|---|---|---|---|
| 1 | ಸಾಗರ ತಾ: ತಾಳಗುಪ್ಪ ಹೋಬಳಿ ಖಂಡಿಕಾ ಗ್ರಾಮ ಪಂಚಾಯ್ತಿಯ ದೊಂಬೆ ಗ್ರಾಮ | ಖಾತೆ ನಂ. 97 ಸ.ನಂ. 33 | 4 ಎಕರೆ 14 ಗುಂಟೆ | ಭಾಗಾಯ್ತು | ಕೆ. ಅಶೋಕ ಬಿನ್ ಗೋವಿಂದ ಭಟ್ಟ, ಅಡಿಕೆ ವ್ಯಾಪಾರಿಗಳು ಜೋಗ ರಸ್ತೆ, ಸಾಗರ |
| 2 | ತಾಳಗುಪ್ಪ ಹೋಬಳಿ ಖಂಡಿಕಾ ಗ್ರಾಮ ಪಂಚಾಯ್ತಿ ದೊಂಬೆ ಗ್ರಾಮ | ಖಾತೆ ನಂ 97 ಸ.ನಂ. 36 | 12 ಎಕರೆ | ಖುಷ್ಕಿ ಜಮೀನು | –ಡಿಟೋ– |
| 3 | ತಾಳಗುಪ್ಪ ಹೋಬಳಿ ಖಂಡಿಕಾ ಗ್ರಾಮ ಪಂಚಾಯ್ತಿಯ ದೊಂಬೆ ಗ್ರಾಮ | ಖಾತೆ ನಂ. 98 ಸ.ನಂ. 33 | 4 ಎಕರೆ | ಭಾಗಾಯ್ತು | ಕೆ. ವಿನಾಯಕ ಬಿನ್ ಗೋವಿಂದ ಭಟ್ಟ ಜೋಗ ರಸ್ತೆ ಸಾಗರ. |

ಈ ಆದೇಶವನ್ನು ಕಛೇರಿಯ ಮುದ್ರೆ ಮತ್ತು ನನ್ನ ಸಹಿಯೊಂದಿಗೆ ದಿನಾಂಕ:26.3.2007 ರಂದು ಹೊರಡಿಸಿ ಸದರಿ ಸ್ಥಿರ ಸ್ವತ್ತನ್ನು ಅರ್ಜಿದಾರರಾದ ವ್ಯವಸ್ಥಾಪಕ ನಿರ್ದೇಶಕರು, ಮಲೆನಾಡು ಅಡಿಕೆ ಮಾರಾಟ ಸಹಕಾರ ಸಂಘ (ನಿ) ಶಿವಮೊಗ್ಗ ಇವರ ಹೆಸರಿಗೆ ವರ್ಗಾವಣೆ ಮಾಡಿ ಆದೇಶಿಸಿದೆ.

**ವೆಂಕಟರಾವ್ ಕುಲಕರ್ಣಿ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಸಾಗರ, ಉಪವಿಭಾಗ, ಸಾಗರ

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ಉಪವಿಭಾಗ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ**

**ನಮೂನೆ–8**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101 ಮತ್ತು ನಿಯಮಗಳು 1960ರ ನಿಯಮ 38 (ಎ) ಮೇರೆಗೆ ಸ್ಥಿರ ಸ್ವತ್ತಿನ ವರ್ಗಾವಣೆಯ ಬಗ್ಗೆ ಪ್ರಮಾಣ ಪತ್ರ.

ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘ (ನಿ) ಶಿವಮೊಗ್ಗ ಇವರ ಪರವಾಗಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 71 ರನ್ವಯ ನಿರ್ಣಯಿಸಿ ನೀಡಲಾದ ಐತೀರ್ಪು (ಅವಾರ್ಡ್) ಗಳನ್ನು ಜಾರಿ ಮಾಡುವುದರ ಕ್ರಮದಲ್ಲಿ ವ್ಯಕ್ತಿಗಳ ಈ ಕೆಳಗೆ ನಮೂದಿಸಿದ ಸ್ವತ್ತಿನ ಮಾರಾಟದ ಬಗ್ಗೆ ದಿನಾಂಕ:12.1.2007 ರಂದು ಆಜ್ಞೆಯನ್ನು ಮಾಡಲಾಗಿರುತ್ತದೆ. ಮತ್ತು ಖರೀದಿಸುವವರ ಅಭಾವದಿಂದಾಗಿ ಸದರಿ ಸೊತ್ತನ್ನು ಹರಾಜು ಮಾಡಲು ಸಾಧ್ಯವಾಗದೆಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ಇವರು ಮನಗಂಡಿರುತ್ತಾರೆ.

ಆದ್ದರಿಂದ ಸದರಿ ಸ್ವತಿನಲ್ಲಿಯ ಸಾಲಗಾರರ ಅಧಿಕಾರ ಹಕ್ಕು ಹಿತಾಸಕ್ತಿಗಳು ವಗೈರೆ ಸದರಿ ಸಹಕಾರ ಸಂಘದಲ್ಲಿ ವಿಲೀನವಾಗತಕ್ಕದೆಂದು ಮತ್ತು ಜೋಡಿಸಲಾದ ಅನುಸೂಚಿಯಲ್ಲಿ ವಿಧಿಸಲಾದ ಷರತ್ತುಗಳಿಗೆ ಹಾಗೂ ನಿಯಮಗಳಿಗೊಳಪಟ್ಟು ಸದರಿ ಸಂಘಕ್ಕೆ ಸ್ವತ್ತುಗಳನ್ನು ಒಪ್ಪಿಸಿಕೊಡತಕ್ಕದೆಂದು ಕಲಂ 101 (ಬಿ) ಮೇರೆಗೆ ಈ ಮೂಲಕ ಆಜ್ಞೆ ಮಾಡಲಾಗಿರುತ್ತದೆ.

**ಅನುಸೂಚಿ**

| ಗ್ರಾಮ | ಸರ್ವೆ ನಂ, | ವಿಸ್ತೀರ್ಣ | ಕಂದಾಯ | ಹಕ್ಕಿನ ಅಧಿಕಾರ ಮತ್ತು ಹಿತಾಸಕ್ತಿ ವಗೈರೆಗಳ ಸ್ವರೂಪ | ಸ್ವತ್ತು ಒಳಪಟ್ಟ ವಿವರ |
|---|---|---|---|---|---|
| 1) ಸಾಗರ ತಾ: ತಾಳಗುಪ್ಪ ಹೋಬಳಿ ಖಂಡಿಕಾ ಗ್ರಾಮ ಪಂಚಾಯ್ತಿ ದೊಂಬೆ ಗ್ರಾಮ | ಖಾತೆ ನಂ. 97 ಸ.ನಂ. 33 | 4 ಎಕರೆ | 14 ಗುಂಟೆ ಭಾಗಾಯ್ತು | ಕೆ. ಅಶೋಕ ಬಿನ್ ಗೋವಿಂದ ಭಟ್ಟ, ಅಡಿಕೆ | ದಾವಾ ಅನಿ (ಬಮಾ) ಡಿಡಿಎಸ್ ಡಿ7 3908/2004–05 ಇಪಿನಂ 4/06.07 |
| 2) ತಾಳಗುಪ್ಪ ಹೋಬಳಿ ಖಂಡಿಕಾ ಗ್ರಾಮ ಪಂಚಾಯ್ತಿ ದೊಂಬೆ ಗ್ರಾಮ | ಖಾತೆ ನಂ. 97 ಸ.ನಂ. 36 | 12 ಎಕರೆ | ಖುಷ್ಕಿ ಜಮೀನು | ವ್ಯಾಪಾರಿಗಳು ಜೋಗ ರಸ್ತೆ, ಸಾಗರ | |
| 3) ತಾಳಗುಪ್ಪ ಹೋಬಳಿ ಖಂಡಿಕಾ ಗ್ರಾಮ ಪಂಚಾಯ್ತಿ ದೊಂಬೆ ಗ್ರಾಮ | ಖಾತೆ ನಂ. 98 ಸ.ನಂ. 33 | 4ಎಕರೆ | ಭಾಗಾಯ್ತು | ಕೆ. ವಿನಾಯಕ ಬಿನ್ ಗೋವಿಂದ ಭಟ್ಟ ಜೋಗ ರಸ್ತೆ, ಸಾಗರ | |

ಸಾಲಗಾರರಿಂದ ಸದರಿ ಸಂಘಕ್ಕೆ ಬರತಕ್ಕ ಮೊತ್ತದ ಸಂಪೂರ್ಣ ಸಂದಾಯದ ಬಗ್ಗೆ ಸದರಿ ಸೊತ್ತುಗಳನ್ನು ವರ್ಗಾವಣೆ ಮಾಡಲ್ಪಟ್ಟಿದೆ.

**ಷರತ್ತುಗಳು–ನಿಯಮಗಳು:**

1. ಸಂಘಕ್ಕೆ ವರ್ಗಾವಣೆ ಮಾಡಲಾದ ಸ್ಥಿರ ಸೊತ್ತುಗಳನ್ನು ಸಂಘವೇ ಉಪಯೋಗಿಸತಕ್ಕದ್ದು.

2. ಪುನಃ ಮಾರಾಟ ಮಾಡಲಾಗುವ ಸಂದರ್ಭದಲ್ಲಿ ಸ್ಥಿರಾಸ್ತಿಯ ಡಿಕ್ರಿ ಬಾಕಿದಾರರ ಅವಿಭಕ್ತ ಕುಟುಂಬದ ಸದಸ್ಯರಿಗೆ ಆಧ್ಯತೆ ನೀಡತಕ್ಕದ್ದು.

3. ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗೆ ಹಣವನ್ನು ಸಂಘದ ಸಾಲದ ಖಾತೆಗೆ ಜಮಾ ಖರ್ಚು ಮಾಡಿಕೊಳ್ಳತಕ್ಕದ್ದು.

4. ಮೆ: ವರದಾ ಅರೇಕಾ ಮಾರ್ಕೆಟಿಂಗ್ ಕಂಪನಿ ಪ್ರೈ.ಲಿ. ಸಾಗರ ಇವರು ತಮಗೆ ಬರಬೇಕಾದ ಬಾಕಿ ಬಗ್ಗೆ ಸದರಿ ಸಾಲಗಾರರ ವಿರುದ್ಧ ದಾವಾವನ್ನು ಸಿವಿಲ್ ಜಡ್ಜ್ (ಸೀನಿಯರ್ ಡಿವಿಜನ್) ಸಾಗರದಲ್ಲಿ ದಾಖಲಿಸಿದ್ದು ಈ ಪ್ರಕರಣದಲ್ಲಿ ಉಳಿದ ಹಣವನ್ನು ಸದರಿಯವರಿಗೆ ಘನ ನ್ಯಾಯಾಲಯದ ಆದೇಶದಂತೆ ನೀಡುವುದು.

ಈ ದಿನ ದಿನಾಂಕ:26.3.2007 ರಂದು ನನ್ನ ರುಜು ಮತ್ತು ಕಛೇರಿ ಮೊಹರಿನೊಂದಿಗೆ ಈ ಪ್ರಮಾಣ ಪತ್ರ ಕೊಡಲ್ಪಟ್ಟಿದೆ.

**ವೆಂಕಟರಾವ್ ಕುಲಕರ್ಣಿ**
ಪಿ.ಆರ್. 602 ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಸಾಗರ, ಉಪವಿಭಾಗ, ಸಾಗರ

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದಾವಣಗೆರೆ ಜಿಲ್ಲೆ ದಾವಣಗೆರೆ, ಇವರ ನ್ಯಾಯಾಲಯದಲ್ಲಿ**

**ಫಿರ್ಯಾದಿದಾರರು**

ಶ್ರೀ ಹೆಚ್.ಎಂ. ಬಸವರಾಜಯ್ಯ,
ಅಬಕಾರಿ ಉಪ ನಿರೀಕ್ಷಕರು,
ಚನ್ನಗಿರಿ ಉಪ ವಲಯ.

**ವಿರುದ್ಧ**

**ಪ್ರತಿನಿಧಿಸುವವರು**

ಸಹಾಯಕ ಅಭಿಯೋಗ ನಿರ್ದೇಶಕರು
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಆರೋಪಿತರು**

ಶ್ರೀ ಹೆಚ್.ಸಿ ಹಾಲೀಶ್ ಬಿನ್ ಚಂದ್ರಶೇಖರಪ್ಪ,
ಬಳೆಗಾರ ಜನಾಂಗ.
ಆಟೋರಿಕ್ಷಾ ಮಾಲಿಕ ಮತ್ತು ಡ್ರೈವರ್, ಬಸವಪಟ್ಟಣ.

**ಪ್ರತಿನಿಧಿಸುವವರು**

ಶ್ರೀ ಹರಿಪ್ರಸಾದ್, ವಕೀಲರು, ಶಿವಮೊಗ್ಗ

ಪ್ರಕರಣದ ಮುಖ್ಯಾಂಶಗಳು:

ದಿನಾಂಕ: 23.7.1995 ರಂದು ಬೆಳಗಿನ ಜಾವ 4.30. ಗಂಟೆಗೆ ನಲ್ಲೂರು ಗ್ರಾಮದಿಂದ ಬಸವಪಟ್ಟಣ ರಸ್ತೆಯಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗುತ್ತಿದೆ ಎಂಬ ಬಾತ್ಮಿಯ ಮೇರೆಗೆ ಪಂಚರನ್ನು ಬರಮಾಡಿಕೊಂಡು ರಸ್ತೆಕಾವಲು ಕಾಯುತ್ತಿದ್ದಾಗ ಬಸವಪಟ್ಟಣ ಕಡೆಯಿಂದ ನಲ್ಲೂರು ಕಡೆಗೆ ಹೋಗುತ್ತಿದ್ದ ವಾಹನ ಸಂಖ್ಯೆ:ಆಟೋರಿಕ್ಷಾ ಕೆಎ 14 ಎಮ್ 1129 ತಡೆದು ನಿಲ್ಲಿಸಿ ತಪಾಸಣೆ ಮಾಡಿ ನೋಡಲಾಗಿ ಅದರಲ್ಲಿ 5 ರಟ್ಟಿನ ಪೆಟ್ಟಿಗೆಗಳಲ್ಲಿ ಸ್ವದೇಶಿ ಮದ್ಯವನ್ನು ಸಾಗಾಣಿಕೆ ಮಾಡುತ್ತಿದ್ದುದು ಕಂಡು ಬಂದಿದ್ದು ಈ ಬಗ್ಗೆ ವಾಹನ ಚಾಲಕರಾದ ಶ್ರೀ ಹೆಚ್.ಸಿ. ಹಾಲೀಶ್ ಬಿನ್ ಚಂದ್ರಶೇಖರಪ್ಪ ಎಂದು ತಿಳಿಸಿದ ವಾಹನ ಚಾಲಕರನ್ನು ಮದ್ಯ ಸಾಗಾಣಿಕೆ ಸಂಬಂಧಿಸಿದಂತೆ ದಾಖಲಾತಿಗಳು ಇದ್ದ ಬಗ್ಗೆ ವಿಚಾರಿಸಲಾಗಿ ಯಾವುದೇ ದಾಖಲಾತಿ ಇಲ್ಲ ಎಂದು ತಿಳಿಸಿದರು. ನಂತರ ಪಂಚರ ಸಮಕ್ಷಮ ತಲಾ ಒಂದೊಂದು ಪೆಟ್ಟಿಗೆಯಲ್ಲಿ 180 ಮಿಲಿಯ ಒಂದೊಂದು ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ನಿಯಮಾನುಸಾರ ಸೀಲ್ ಮಾಡಿ ಪಂಚರ ಸಮಕ್ಷಮ ವಾಹನ ಹಾಗೂ ಮದ್ಯವನ್ನು ಜಪ್ತಿಮಾಡಲಾಯಿತು. ಈ ಬಗ್ಗೆ ಫಿರ್ಯಾದಿಯು ಗುನ್ಹೆ ಸಂಖ್ಯೆ: ಪ್ರಮಾವ:1:95-96, ದಿನಾಂಕ:23.7.1995 ರನ್ವಯ ಪ್ರಕರಣ ದಾಖಲಿಸಿ, ಈ ಪ್ರಾಧಿಕಾರಕ್ಕೆ ಪ್ರಥಮ ವರ್ತಮಾನ ವರದಿ, ಸ್ವತ್ತಿನ ಪಟ್ಟಿ ಮತ್ತು ಜಪ್ತಿ ಪಂಚನಾಮೆಯನ್ನು ಸಲ್ಲಿಸಿರುತ್ತಾರೆ.

ದಿನಾಂಕ:1.8.1995 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಶಿವಮೊಗ್ಗ ಇವರು ನೀಡಿದ ವಾಹನದ ಮಾಲೀಕತ್ವದ ಬಗ್ಗೆ ದೃಢೀಕರಣ ಪತ್ರ ಪರಿಶೀಲಿಸಲಾಗಿ ವಾಹನವು ಶ್ರೀ ಹೆಚ್.ಸಿ. ಹಾಲೀಶ್ ಬಿನ್ ಚಂದ್ರಶೇಖರಪ್ಪ, ಬಸವಪಟ್ಟಣ, ಚನ್ನಗಿರಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಹೆಸರಿನಲ್ಲಿ ಇರುವುದಾಗಿ ತಿಳಿದು ಬಂದಿರುತ್ತದೆ.

ದಿನಾಂಕ:18-11-1995 ರ ರಾಸಾಯನಿಕ ತಜ್ಞರ ವರದಿಯನ್ನು ಪರಿಶೀಲಿಸಲಾಗಿ ಜಪ್ತಿ ಮಾಡಿದ ದ್ರವದಲ್ಲಿ ಮದ್ಯ್ ಇರುವಿಕೆಯಿರುವುದು ದೃಢಪಟ್ಟಿರುತ್ತದೆ.

ವಾಹನದ ಮಾಲೀಕರಾದ ಶ್ರೀ ಹೆಚ್.ಸಿ. ಹಾಲೀಶ್ ಇವರು ಈ ಪ್ರಾಧಿಕಾರಕ್ಕೆ ಶ್ರೀ ಎಸ್.ಹರಿಪ್ರಸಾದ್, ವಕೀಲರು,. ಶಿವಮೊಗ್ಗ ಇವರ ಮೂಲಕ ಅರ್ಜಿ ಸಲ್ಲಿಸಿ ಜಪ್ತಿ ಮಾಡಿದ ವಾಹನವನ್ನು ಮಧ್ಯಂತರ ಆದೇಶದ ಮೇರೆಗೆ ಬಿಡುಗಡೆಗೊಳಿಸಲು ಕೋರಿರುತ್ತಾರೆ. ವಾಹನದ ಮಾಲೀಕರ ಅರ್ಜಿಯನ್ನು ಪರಿಶೀಲಿಸಿ ಈ ಪ್ರಾಧಿಕಾರವು ದಿನಾಂಕ:16.8.1995ರ ಆದೇಶದಲ್ಲಿ ಕೆಲವು ಷರತ್ತುಗಳನ್ನು ವಿಧಿಸಿ ಈ ಷರತ್ತುಗಳನ್ನು ಪೂರೈಸಿದಲ್ಲಿ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆಗೊಳಿಸುವುದಾಗಿ ಆದೇಶಿಸಲಾಗಿತ್ತು. ಅರ್ಜಿದಾರರು ಈ ಪ್ರಾಧಿಕಾರದ ಷರತ್ತುಗಳಂತೆ ರೂ. 13,000-00 ಮೊತ್ತದ ಬ್ಯಾಂಕ್ ಗ್ಯಾರಂಟಿಯನ್ನು ಕೆನರಾ ಬ್ಯಾಂಕ್, ಬಸವಪಟ್ಟಣ, ಚನ್ನಗಿರಿ ತಾಲ್ಲೂಕು ಶಿವಮೊಗ್ಗ ಜಿಲ್ಲೆ ಇಲ್ಲಿಂದ ಬ್ಯಾಂಕ್ ಗ್ಯಾರಂಟಿ ನಂ. 1:95, ದಿನಾಂಕ:19.8.1995ರ ಅನ್ವಯ ಪಡೆದು ಸಲ್ಲಿಸಿದ್ದುದರಿಂದ ವಾಹನವನ್ನು ತಾತ್ಕಾಲಿಕವಾಗಿ ಮಾಲೀಕರ ವಶಕ್ಕೆ ಕೆಲವು ಷರತ್ತುಗಳನ್ನು ವಿಧಿಸಿ ಬಿಡುಗಡೆಗೊಳಿಸಲಾಗಿತ್ತು.

ಪ್ರಕರಣದ ಸಾಕ್ಷಿ ವಿಚಾರಣೆ ಕುರಿತು ದಾಖಲಾತಿಗಳ ದೃಢೀಕೃತ ನಕಲುಗಳನ್ನು ಪಡೆದುಕೊಂಡು ವಿಚಾರಣೆಯನ್ನು ಗೊತ್ತುಪಡಿಸಿ ಈ ಪ್ರಕರಣದ ಫಿರ್ಯಾಧಿದಾರರಿಗೆ ತನಿಖಾಧಿಕಾರಿ, ಪಂಚರು ಹಾಗೂ ವಾಹನದ ಮಾಲೀಕರಿಗೆ ನೋಟೀಸುಗಳನ್ನು ನೀಡಿದ್ದು, ಅಭಿಯೋಗ ಪರವಾಗಿ ಪಿಡಬ್ಲೂಡಿ1, ಮತ್ತು ಪಿಡಬ್ಲೂಡಿ 2 ರ ಸಾಕ್ಷಿಗಳನ್ನು ವಿಚಾರಣೆ ಮಾಡಿದ್ದು ಅವುಗಳಿಗೆ ನಿಶಾನೆ ಪಿ.1, ಪಿ.1 ಬಿ ಎಂದು ಗುರುತಿಸಲಾಗಿದೆ. ಮತ್ತು ಕ್ಲೇಮುದಾರರ ಪರವಾಗಿ ವಾಹನದ ಮಾಲೀಕರ ವಿಚಾರಣೆ ಮಾಡಿ ಅವರ ಹೇಳಿಕೆಯನ್ನು ದಾಖಲಿಸಲಾಗಿರುತ್ತದೆ.

ಪ್ರಕರಣದಲ್ಲಿ ಲಭ್ಯವಿರುವ ದಾಖಲಾತಿಗಳು, ಸಾಕ್ಷಿ ವಿಚಾರಣೆಗಳನ್ನು ಪುರಾವೆಗೆ ಹಾಗೂ ಗಣನೆಗೆ ತೆಗೆದುಕೊಂಡು ಮತ್ತು ಪ್ರಕರಣದ ಸಂಪೂರ್ಣ ವಿದ್ಯಮಾನವನ್ನು ಗಮನಿಸಿದಾಗ ಈ ಪ್ರಕರಣದಲ್ಲಿನ ಪಂಚ ಸಾಕ್ಷಿದಾರರಾದ ಶ್ರೀ ಕೆಂಚಪ್ಪ ತಂದೆ ಹೊನ್ನೂರಪ್ಪ, ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ:22.3.2001 ರಂದು ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ.

ಈ ಪ್ರಕರಣದಲ್ಲಿ ಅರ್ಜಿದಾರರ ಪರ ವಕೀಲರು ಹಾಗೂ ಸಹಾಯಕ ಅಭಿಯೋಜಕ ನಿರ್ದೇಶಕರ ವಾದವನ್ನು ಆಲಿಸಿದ್ದು, ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವ ಮೊದಲು ಈ ಕೆಳಕಂಡ ವಿವಾದಾಂಶ ಉತ್ತರ ಪಡೆಯುವುದು ಅತಿ ಅವಶ್ಯವಿರುತ್ತದೆ.

1. ವಾಹನ ಸಂಖ್ಯೆ: ಆಟೋರಿಕ್ಷಾ ನಂ. ಕೆಎ 14 ಎಮ್ 1129ರಲ್ಲಿ ಸಾಗಾಣಿಕೆ ಆಗುತ್ತಿದ್ದ ವಸ್ತು ಅಬಕಾರಿ ವಸ್ತುವಾಗಿದೆಯೇ, ಹೇಗೆ?

2. ಈ ಪ್ರಕರಣದಲ್ಲಿ ಜಪ್ತಿಮಾಡಿದ ವಾಹನವನ್ನು ಅಬಕಾರಿ ಕಾಯ್ದೆ ಕಲಂಗಳ ಉಲ್ಲಂಘನೆಗಾಗಿ ಬಳಸಿರುವುದು ಸಾಬೀತಾಗಿರುತ್ತದೆಯೇ ಹೇಗೆ?

3. ಜಪ್ತಾದ ಆಟೋರಿಕ್ಷಾ ಪ್ರಾಧಿಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೇ?

**1ನೇ ವಿವಾದಾಂಶಕ್ಕೆ ಉತ್ತರ:**

ಶ್ರೀ ಎಂ.ಬಸವರಾಜಯ್ಯ, ಆಗಿನ ಅಬಕಾರಿ ಉಪ ನಿರೀಕ್ಷಕರು, ಚನ್ನಗಿರಿ ಉಪ ವಲಯ, ಇವರು ಈ ಪ್ರಕರಣದಲ್ಲಿ ಜಪ್ತಿ ಮಾಡಿದ ಮದ್ಯದ ಪೆಟ್ಟಿಗೆಗಳಿಂದ ಮಾದರಿಯನ್ನು ತೆಗೆದು ಪಂಚರ ಸಮಕ್ಷಮ ಪ್ರತಿ ಬಾಟಲಿಗಳಿಗೆ ಸೀಲು ಮಾಡಿ ಅವರುಗಳ ಸಹಿ ಪಡೆದು ರಾಸಾಯನಿಕ ಪರೀಕ್ಷೆಗೆ ದಿನಾಂಕ:16.11.1995ರ ಪತ್ರ ಸಂಖ್ಯೆ:ಇಎಕ್ಸ್‌ಇ:ಸಿ:3:ಹೆಚ್.ಎಸ್:3:95-96

ರೊಂದಿಗೆ ಕಳುಹಿಸಿದ್ದು ಮುಖ್ಯ ರಾಸಾಯನಿಕ ತಜ್ಞರು ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ ಬೆಂಗಳೂರು, ಇವರು ದಿನಾಂಕ:18.11.1995 ರ ಪತ್ರದಲ್ಲಿ ಜಪ್ತಿಮಾಡಿದ ಈ ಮದ್ಯದಲ್ಲಿ ಈಥೈಲ್ ಆಲ್ಕೋಹಾಲ್ ಅಂಶವು ಇರುವುದಾಗಿ ಹಾಗೂ ಮದ್ಯವು ಮಾನವ ಸೇವನೆಗೆ ಯೋಗ್ಯವಾಗಿರುವ ಬಗ್ಗೆ ದೃಢೀಕರಿಸಿರುತ್ತದೆ. ಚನ್ನಗಿರಿ ವಲಯದಲ್ಲಿ ಅಬಕಾರಿ ರಕ್ಷಕರು ಈ ಪ್ರಕರಣವನ್ನು ದಾಖಲಿಸುವಾಗ ಹಾಜರಿದ್ದ ಶ್ರೀ ಸೈಯದ್ ಅಬ್ದುಲ್ ರಹೀಂ ಬಿನ್ ಸೈಯದ್ ಅಲೀಂ ಇವರು ದಿನಾಂಕ:23.3.2000 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡುತ್ತಾ ದಿನಾಂಕ:17.11.1995 ರಂದು ಈ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಮದ್ಯದ ಬಾಟಲಿಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ತೆಗೆದುಕೊಂಡು ಹೋಗಿದ್ದು ಬಾಟಲಿಗಳನ್ನು ಸೀಲ್ ಮಾಡಲಾಗಿತ್ತು. ರಾಸಾಯನಿಕ ವಿಶ್ಲೇಷಣಾ ವರದಿಯೊಂದಿಗೆ ಪುನಃ ಬಾಟಲಿಗಳನ್ನು ಅಬಕಾರಿ ಉಪ ನಿರೀಕ್ಷಕರು, ಚನ್ನಗಿರಿ ವಲಯ, ಇವರಿಗೆ ತಲುಪಿರುವುದಾಗಿ ತಿಳಿಸಿರುತ್ತಾರೆ. ಈ ಪ್ರಕರಣದಲ್ಲಿನ ಸಾಕ್ಷಿದಾರರಾದ ಶ್ರೀ. ಕೆಂಚಪ್ಪ ಬಿನ್ ಹೊನ್ನಾರಪ್ಪ ಹಾಗೂ ಆಗಿನ ಚನ್ನಗಿರಿ ವಲಯದ ಅಬಕಾರಿ ರಕ್ಷಕರಾದ ಶ್ರೀ ಸೈಯದ್ ಅಬ್ದುಲ್ ರಹೀಂ ಇವರುಗಳನ್ನು ಅರ್ಜಿದಾರರ ಪರ ವಕೀಲರು ಪಾಟೀ ಸವಾಲು ಮಾಡಿರುತ್ತಾರೆ. ಆದರೆ ಈ ಅಂಶವನ್ನು ಅಲ್ಲಗಳೆದಿರುವುದಿಲ್ಲ. ಈ ಎಲ್ಲಾ ಹಿನ್ನಲೆಯಲ್ಲಿ ಜಪ್ತಾದ ಆಟೋರಿಕ್ಷಾದಲ್ಲಿ ಸಾಗಾಣಿಕೆ ಮಾಡುತ್ತಿದ್ದ ವಸ್ತು ಅಬಕಾರಿ ವಸ್ತುವಾಗಿದೆ ಎಂದು ನಿಸ್ಸಂದೇಹವಾಗಿ ದೃಢಪಟ್ಟಿರುತ್ತದೆ. ಆದ್ದರಿಂದ 1ನೇ ವಿವಾದಾಂಶಕ್ಕೆ ಉತ್ತರ ಹೌದು ಎಂದು ನಿರೂಪಿಸಿರುತ್ತೇನೆ.

**2ನೇ ವಿವಾದಾಂಶಕ್ಕೆ ಉತ್ತರ:**

2ನೇ ವಿವಾದಾಂಶಕ್ಕೆ ಉತ್ತರ ಹುಡುಕಲು ಈ ಪ್ರಕರಣದಲ್ಲಿ ಸಾಕ್ಷಿದಾರರ ಹೇಳಿಕೆ ಹಾಗೂ ದಾಖಲಾತಿಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿರುತ್ತದೆ. ಪ್ರಕರಣದಲ್ಲಿನ ಫಿರ್ಯಾದಿದಾರರಾದ ಶ್ರೀ ಹೆಚ್.ಎಂ. ಬಸವರಾಜಯ್ಯ ಅಂದಿನ ಅಬಕಾರಿ ಉಪ ನಿರೀಕ್ಷಕರು, ಚನ್ನಗಿರಿ ವಲಯ, ಇವರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡುತ್ತಾ ದಿನಾಂಕ:23.7.1995 ರಂದು ಮದ್ಯ ಸಾಗಾಣಿಕೆಯಾಗುತ್ತಿದೆಯೆಂದು ಬಂದಿರುವ ವರ್ತಮಾನದ ಮೇರೆಗೆ ಅಂದು ಬೆಳಗಿನ ಜಾವ 4.30ರ ವೇಳೆಗೆ ನಲ್ಲೂರು ಗ್ರಾಮದ ಬಸ್ ನಿಲ್ದಾಣಕ್ಕೆ ಬಂದು ಅಲ್ಲಿ ಪಂಚರನ್ನು ಕರೆದುಕೊಂಡು ಸಿಬ್ಬಂದಿಗಳೊಂದಿಗೆ ನಲ್ಲೂರು ಗ್ರಾಮದಿಂದ ಬಸವಪಟ್ಟಣಕ್ಕೆ ಹೋಗುವ ರಸ್ತೆಯಲ್ಲಿ ಸೇತುವೆ ಬಳಿ ರಸ್ತೆ ಕಾವಲು ಕಾಯುತ್ತಿದ್ದಾಗ ಬಸವಪಟ್ಟಣದ ಕಡೆಯಿಂದ ನಲ್ಲೂರು ಕಡೆಗೆ ಒಂದು ಆಟೋ ಹೋಗುತ್ತಿರುವುದನ್ನು ಕಂಡು ಅದನ್ನು ನಿಲ್ಲಿಸಿ ಏನಿದೆ ಎಂದು ಆಟೋಚಾಲಕನನ್ನು ವಿಚಾರಿಸಲಾಗಿ ಮದ್ಯ ಇದೆ ಎಂದು ಅವನು ತಿಳಿಸಿದಾಗ ಪರಿಶೀಲಿಸಿ ನೋಡಿದಾಗ ಆಟೋಚಾಲಕನ ಹಿಂಬದಿಯ ಸೀಟಿನ ಮೇಲೆ 5 ರಟ್ಟಿನ ಪೆಟ್ಟಿಗೆಗಳಿದ್ದು ಪಂಚರ ಸಮಕ್ಷಮ ಅವುಗಳನ್ನು ಬಿಚ್ಚಿ ನೋಡಲಾಗಿ ಪ್ರತಿ ಪೆಟ್ಟಿಗೆಗಳಲ್ಲಿ 180 ಮಿಲಿಯ 48 ಬಾಟಲಿಗಳಂತೆ 4 ಪೆಟ್ಟಿಗೆಗಳಲ್ಲಿ 192 ಮದ್ಯದ ನಿಶಾವೈನ್ಸ್ ವಿಸ್ಕಿ ಹಾಗೂ 180 ಮಿಲಿಯ 20 ಬಾಟಲಿಗಳನ್ನು ಹೊಂದಿರುವ ಒಂದು ಪೆಟ್ಟಿಗೆಯಲ್ಲಿ ತಾಜಾ ವಿಸ್ಕಿಯು ಇದ್ದು ಈ ಬಗ್ಗೆ ಯಾವುದಾದರೂ ರಹದಾರಿ ಇದೆಯೇ ಎಂದು ಕೇಳಲಾಗಿ ಆಟೋಚಾಲಕನು ರಹದಾರಿ ಇಲ್ಲವೆಂದು ಹೇಳಿದ್ದರಿಂದ ಅಕ್ರಮವಾಗಿ ತೆರಿಗೆ ರಹಿತ ಮದ್ಯವನ್ನು ಸಾಗಾಣಿಕೆ ಮಾಡುತ್ತಿದ್ದುದರಿಂದ ಪಂಚರ ಸಮಕ್ಷಮ ಪ್ರತಿ ಪೆಟ್ಟಿಗೆಗಳಿಂದ ಒಂದೊಂದು ಮದ್ಯದ ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು ಸೀಲ್ ಮಾಡಿ ಪಂಚರ ಸಹಿ ಪಡೆದ ಚೀಟಿಗಳನ್ನು ಬಾಟಲಿಗಳಿಗೆ ಅಂಟಿಸಿ ಸ್ಥಳದಲ್ಲಿಯೇ ಮಹಜರ್ ಮಾಡಲಾಯಿತಾಗಿ ಹೇಳಿಕೆ ನೀಡಿರುತ್ತಾರೆ. ಪಂಚನಾಮೆಯನ್ನು ಬೆಳಗಿನ ಜಾವ 5 ರಿಂದ 5.45 ರವರೆಗೆ ಬರೆದಿದ್ದ ಆರೋಪಿಯ ಬಗ್ಗೆ ವಿವರವನ್ನು ಕೇಳಲಾಗಿ ಹೆಚ್.ಸಿ. ಹಾಲೀಶ್ ಬಿನ್ ಚಂದ್ರಶೇಖರಪ್ಪ, ಬಸವಪಟ್ಟಣ ವಾಸಿ ಚನ್ನಗಿರಿ ತಾಲ್ಲೂಕು ಎಂದು ತಿಳಿಸಿದ್ದು ಆರೋಪಿಯನ್ನು ದಸ್ತಗಿರಿ ಮಾಡಿ ಮದ್ಯವನ್ನು ಜಪ್ತಿ ಮಾಡಿ ಕಛೇರಿಗೆ ಬಂದು ಮೊಕದ್ದಮೆಯನ್ನು ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ ಹಾಗೂ ಇತರೆ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆಯಾಗಿ ತಿಳಿಸಿರುತ್ತಾರೆ.

ಈ ಪ್ರಕರಣದಲ್ಲಿನ ಆರೋಪಿ ಪರ ಸಾಕ್ಷಿದಾರರಾದ ಸೈಯದ್ ಅಬ್ದುಲ್ ರಹೀಂ ಬಿನ್ ಸೈಯದ್ ಆಲಿ ಇವರು ದಿನಾಂಕ:22.3.2001 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡುತ್ತಾ 1995ರಲ್ಲಿ ಅಬಕಾರಿ ರಕ್ಷಕರಾಗಿ ಚನ್ನಗಿರಿ ಉಪ ವಲಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಆಗ ಬಸವರಾಜ ಎನ್ನುವವರು ಚನ್ನಗಿರಿ ವಲಯದ ಅಬಕಾರಿ ಉಪ ನಿರೀಕ್ಷಕ ರಾಗಿದ್ದು ದಿನಾಂಕ:23.7.1995 ರಂದು ಅಬಕಾರಿ ಉಪ ನಿರೀಕ್ಷಕರೊಂದಿಗೆ ಸೋಮಶೆಟ್ಟಿ ಹಳ್ಳಿ ಸೇತುವೆ ಹತ್ತಿರ ರಸ್ತೆ ಕಾವಲು ಮಾಡುತ್ತಿದ್ದಾಗ ಬಸವಪಟ್ಟಣ ಕಡೆಯಿಂದ ಬರುತ್ತಿದ್ದ ಆಟೋವನ್ನು ನಿಲ್ಲಿಸಿ ಪರಿಶೀಲಿಸಿದಾಗ ಅದರಲ್ಲಿ ಮದ್ಯ ಸಾಗಾಣಿಕೆಯಾಗುತ್ತಿದ್ದು, ಈ ಮದ್ಯಕ್ಕೆ ರಹದಾರಿ ವಗೈರೆ ಯಾವುದೇ ಇಲ್ಲವಾದ್ದರಿಂದ ಪಂಚರ ಸಮಕ್ಷಮ ಮಹಜರ್ ತಯಾರಿಸಿ ಮದ್ಯದ ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗೆ ತೆಗೆದು ಮದ್ಯದ ಬಾಟಲಿಗಳ ಮೇಲೆ ಅಂಟಿಸಿದ ಚೀಟಿಗಳಿಗೆ ಹಾಗೂ ಮಹಜರ್‌ಗೆ ಪಂಚರ ಸಹಿ ಪಡೆದಿರುವುದಾಗಿ ಹೇಳಿಕೆ ನೀಡಿರುತ್ತಾರೆ. ಮಹಜರ್ ಹಾಗೂ ಅದರ ಮೇಲಿನ ಅವರ ಸಹಿಯನ್ನು ವಿಚಾರಣೆಯ ಸಮಯದಲ್ಲಿ ಗುರುತಿಸಿರುತ್ತಾರೆ. ಮಹಜರ್‌ನ್ನು ನಿಶಾನೆ ಪಿ1 ಎಂದು ಗುರುತಿಸಲಾಗಿದೆ. ಅರ್ಜಿದಾರರ ಪರ ವಕೀಲರು ಪಾಟೀ ಸವಾಲಿಗೆ ಉತ್ತರಿಸುತ್ತಾ ಮದ್ಯವನ್ನು ವಾಹನದೊಂದಿಗೆ ಜಪ್ತಿಮಾಡಿದಾಗ ಕೆಂಚಪ್ಪ ಮತ್ತು ರಂಗನಾಥ ಈ ಇಬ್ಬರೂ ಪಂಚರಿದ್ದು, ಅವರುಗಳ ಸಹಿಯನ್ನು ಮಹಜರ್‌ಗೆ ಪಡೆಯಲಾಗಿದ್ದು. ಮಹಜರ್‌ನ್ನು ಸ್ಥಳದಲ್ಲಿಯೇ ಫಿರ್ಯಾಧಿದಾರರಾದ ಬಸವರಾಜಯ್ಯ, ಅಬಕಾರಿ ಉಪ ನಿರೀಕ್ಷಕರು, ಇವರು ಬರೆದಿರುತ್ತಾರೆಂಬುದಾಗಿ ಸಾಕ್ಷಿ ನೀಡುತ್ತಾ ಆಟೋರಿಕ್ಷಾದಲ್ಲಿ ಮದ್ಯ ಇರಲಿಲ್ಲ ಎಂಬುದು ಸುಳ್ಳು ಎಂದು ಹೇಳಿರುತ್ತಾರೆ. ಪಂಚನಾಮೆಯಲ್ಲಿನ ಸಾಕ್ಷಿದಾರರಾದ ಶ್ರೀ ಕೆಂಚಪ್ಪ ಬಿನ್ ಹೊನ್ನಾರಪ್ಪ ಇವರು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನೀಡಿ ಜಪ್ತಿಮಾಡಿದ ಆಟೋದಲ್ಲಿ 5 ಪೆಟ್ಟಿಗೆಗಳಲ್ಲಿ ಮದ್ಯವಿದ್ದು ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದ್ದ ಬಗ್ಗೆ ಹೇಳಿಕೆ ನೀಡಿರುತ್ತಾರೆ. ಮಹಜರ್‌ನ್ನು ಸ್ಥಳದಲ್ಲಿಯೇ ಬರೆದಿದ್ದು

ಮಹಜರ್‌ನಲ್ಲಿನ ಅವರ ಸಹಿಯನ್ನು ಗುರುತಿಸಿರುತ್ತಾರೆ ಇದನ್ನು ನಿಶಾನೆ ಪಿ1 ಬಿ ಎಂದು ಗುರುತಿಸಲಾಗಿದೆ. ಅರ್ಜಿದಾರರ ಪರ ವಕೀಲರು ಈ ಪ್ರಕರಣದಲ್ಲಿ ಅಕ್ರಮವಾಗಿ ಮದ್ಯವನ್ನು ಆಟೋರಿಕ್ಷಾದಲ್ಲಿ ಸಾಗಾಣಿಕೆ ಮಾಡಿಲ್ಲ ಎಂದು ನಿರೂಪಿಸುವಲ್ಲಿ ಸಮರ್ಥರಾಗಿರುವುದಿಲ್ಲ. ಆದುದರಿಂದ, ಈ ಪ್ರಕರಣದಲ್ಲಿ ಜಪ್ತಿ ಮಾಡಿದ ಆಟೋರಿಕ್ಷಾ ಸಂ:ಕೆಎ 14 ಎಂ.1129 ರಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಣಿಕೆ ಮಾಡಲು ಬಳಸಿ ಅಬಕಾರಿ ಕಾಯ್ದೆಯ ಕಲಂಗಳ ಉಲ್ಲಂಘನೆ ಮಾಡಿರುವುದು ಸಾಬೀತಾಗಿರುತ್ತದೆ. ಆದ್ದರಿಂದ 2ನೇ ವಿವಾದಾಂಶಕ್ಕೆ ಉತ್ತರ ಹೌದು ಎಂದು ನಿರೂಪಿಸುತ್ತೇನೆ.

ದಿನಾಂಕ:16.5.2001 ರಂದು ವಾಹನದ ಮಾಲಿಕರಾದ ಹಾಲೇಶ್, ಇವರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಹೇಳಿಕೆ ನೀಡಿ ವಾಹನವನ್ನು ಟ್ರಿಪ್ ಹೊಡೆಯುವ ಸಲುವಾಗಿ ಇಟ್ಟುಕೊಂಡಿದ್ದು ದಿನಾಂಕ:23.7.1995 ರಂದು ವಾಹನವನ್ನು ಜಪ್ತಿಮಾಡಿದಾಗ ಅವರೇ ಚಾಲನೆ ಮಾಡುತ್ತಿದ್ದುದಾಗಿ ಹೇಳಿರುತ್ತಾರೆ. ಜಪ್ತಿಮಾಡಿದ ವಾಹನವನ್ನು ಇಲಾಖೆಯಿಂದ ತಾತ್ಕಾಲಿಕವಾಗಿ ಬಿಡುಗಡೆಗೊಳಿಸಿಕೊಂಡಿದ್ದು ಇಲಾಖೆಯು ವಶಪಡಿಸಿಕೊಂಡ ಮದ್ಯಕ್ಕೂ ಹಾಗೂ ವಾಹನಕ್ಕೂ ಯಾವುದೇ ಸಂಬಂಧವಿಲ್ಲವಾಗಿ ಹೇಳಿಕೆ ನೀಡಿರುತ್ತಾರೆ. ವಾಹನದ ಮಾಲೀಕರು ಹಾಗೂ ಅವರ ವಕೀಲರು ವಾಹನ ಮದ್ಯ ಸಾಗಾಣಿಕೆಯಾಗಿಲ್ಲವೆಂಬುದನ್ನು ನಿರೂಪಿಸಲು ವಿಫಲರಾಗಿರುತ್ತಾರೆ. ಸಹಾಯಕ ಅಭಿಯೋಜಕ ನಿರ್ದೇಶಕರು ವಾದ ಮಂಡಿಸಿ ಈ ಪ್ರಕರಣದಲ್ಲಿನ ಸಾಕ್ಷಿಗಳ ವಿಚಾರಣೆಯಿಂದ ವಶಪಡಿಸಿಕೊಂಡ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವ ಬಗ್ಗೆ ಈ ಪ್ರಾಧಿಕಾರಕ್ಕೆ ಖಚಿತಪಡಿಸಿರುತ್ತಾರೆ.

ಈ ಪ್ರಾಧಿಕಾರದ ಮುಂದೆ ಹಾಜರಿದ್ದ ಸಹಾಯಕ ಅಭಿಯೋಜಕ ನಿರ್ದೇಶಕರು ಮತ್ತು ಅರ್ಜಿದಾರರ ಪರ ವಕೀಲರ ವಾದ–ವಿವಾದವನ್ನು ಆಲಿಸಲಾಯಿತು. ಅರ್ಜಿದಾರರ ಪರ ವಕೀಲರು ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ. ಸಹಾಯಕ ಅಭಿಯೋಜಕ ನಿರ್ದೇಶಕರು ವಾದ ಮಂಡಿಸುತ್ತಾ ಈಗಾಗಲೇ ಈ ಪ್ರಕರಣದಲ್ಲಿನ ಸಾಕ್ಷಿಗಳನ್ನು ವಿಚಾರಣೆ ಮಾಡಿದ್ದು ಸದರಿ ಸಾಕ್ಷಿ ವಿಚಾರಣೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆ ಎಂಬ ಬಗ್ಗೆ ಸ್ಪಷ್ಟವಾದ ಚಿತ್ರಣ ನೀಡಿ ಈ ಪ್ರಾಧಿಕಾರಕ್ಕೆ ಮನವರಿಕೆ ಮಾಡಿರುತ್ತಾರೆ. ಆದ್ದರಿಂದ ಈ ಪ್ರಾಧಿಕಾರವು ಸಹಾಯಕ ಅಭಿಯೋಜಕ ನಿರ್ದೇಶಕರ ವಾದದಲ್ಲಿ ಸತ್ಯಾಂಶವಿದೆ ಎಂದು ಭಾವಿಸಿದೆ.

ಅರ್ಜಿದಾರರ ಪರ ವಕೀಲರು ಹಾಗೂ ಸಹಾಯಕ ಅಭಿಯೋಜಕ ನಿರ್ದೇಶಕರು ವಾದ ವಿವಾದಗಳನ್ನು ಸಂಪೂರ್ಣವಾಗಿ ಆಲಿಸಲಾಗಿ ಈ ಪ್ರಕರಣದಲ್ಲಿ ಅರ್ಜಿದಾರರು ಸರ್ಕಾರದ ಆದಾಯಕ್ಕೆ ವಂಚನೆ ಮಾಡಿ ಅಕ್ರಮವಾಗಿ ಮದ್ಯವನ್ನು ಸಾಗಾಣಿಕೆ ಮಾಡಿರುವುದು ದೃಢಪಟ್ಟಿರುತ್ತದೆ. ಅಲ್ಲದೇ ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಎಲ್ಲಾ ಕಾರಣಗಳಿಂದ ಪ್ರಕರಣದಲ್ಲಿ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಮನವರಿಕೆಯಾದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಇಎಕ್ಸ್‌ಇ:ಡಿಟಿಸಿಆರ್:44:95–96, ದಿನಾಂಕ:26ನೇ ಏಪ್ರಿಲ್ 2007**

ಬಿ.ವಿ. ಹೂವಪ್ಪಗೌಡ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ದಾವಣಗೆರೆ ಜಿಲ್ಲೆ, ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಯ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಚನ್ನಗಿರಿ ಉಪ ವಲಯ, ಇವರು ದಾಖಲಿಸಿದ ಗುನ್ನೆ ಸಂಖ್ಯೆ:1:96 ಪ್ರ.ಮಾ.ವ.ಸಂ:1–95–96, ದಿ:23–7–95 ರ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ:ಆಟೋರಿಕ್ಷ ಕೆಎ 14 ಎಮ್ 1129 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿರುತ್ತೇನೆ. ಈ ಪ್ರಕರಣದಲ್ಲಿ ವಶಪಡಿಸಿಕೊಂಡ 38.160 ಲೀಟರ್ ಮದ್ಯ (ರಾಸಾಯನಿಕ ವಿಶ್ಲೇಷಣೆಗಾಗಿ ತೆಗೆದ ಮಾದರಿಯನ್ನು ಹೊರತು ಪಡಿಸಿ) ಉಳಿದ ಮದ್ಯವನ್ನು ವಿಲೇವಾರಿ ಮಾಡಿದ ಕ್ರಮವನ್ನು ಸಿಂಧುತ್ವಗೊಳಿಸಲಾಗಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:26.4.2007 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಇ.ಐ.ಬಿ. ದಾವಣಗೆರೆ ಜಿಲ್ಲೆ, ದಾವಣಗೆರೆ

**ಅನುಬಂಧ–1**

**ಫಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

1. ಶ್ರೀ ಎಂ. ಬಸವರಾಜಯ್ಯ, ಅಂದಿನ ಅಬಕಾರಿ ಉಪ ನಿರೀಕ್ಷಕರು, ಚನ್ನಗಿರಿ ವಲಯ,
2. ಶ್ರೀ ಸೈಯದ್ ಅಬ್ದುಲ್ ರಹೀಂ, ಅಂದಿನ ಅಬಕಾರಿ ರಕ್ಷಕರು, ಚನ್ನಗಿರಿ ವಲಯ
3. ಶ್ರೀ ಕೆಂಚಪ್ಪ ಬಿನ್ ಹೊನ್ನೂರಪ್ಪ, ಪಾಂಡುಮಟ್ಟ, ಚನ್ನಗಿರಿ ತಾಲ್ಲೂಕು

**ಅನುಬಂಧ–2**

**ಫಿರ್ಯಾಧಿದಾರರ ಪರ ಮಂಡಿಸಲಾದ ದಾಖಲಾತಿಗಳು:**

1. ಶೋಧನಾ ಪತ್ರದ ಪ್ರತಿ.
2. ಪಂಚನಾಮೆ ಪ್ರತಿ

3. ಸ್ವತ್ತಿನ ಪಟ್ಟಿ
4. ಪ್ರಥಮ ಮಾಹಿತಿ ವರದಿ ಪ್ರತಿ
5. ರಾಸಾಯನಿಕ ತಜ್ಞರ ವರದಿ ಪ್ರತಿ

**ಅನುಬಂಧ –3**

**ವಾಹನದ ಮಾಲೀಕರ ಪರ ವಿಚಾರಣೆ ಮಾಡಿದ ಸಾಕ್ಷಿದಾರರು:**

ಶ್ರೀ ಹೆಚ್.ಸಿ. ಹಾಲೇಶ್ ಬಿನ್ ಚಂದ್ರಶೇಖರಪ್ಪ, ವಾಹನದ ಮಾಲೀಕರು, ಬಸವಪಟ್ಟಣ, ಚನ್ನಗಿರಿ ತಾಲ್ಲೂಕು

**ಅನುಬಂಧ–4**

**ವಾಹನದ ಮಾಲೀಕರ ಪರ ಗುರುತಿಸಲಾದ ದಾಖಲೆಗಳು:**

ಇಲ್ಲ

ಪಿ.ಆರ್. 642

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಇ.ಐ.ಬಿ. ದಾವಣಗೆರೆ ಜಿಲ್ಲೆ, ದಾವಣಗೆರೆ

**(ಸಹಕಾರ ಇಲಾಖೆ)**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–18**

**ದಾವಾ ಸಂಖ್ಯೆ:ಜೆಆರ್‌ಬಿ/ಎಂಡಿ/18/2001–02**

**ವಾದಿ:**

ಬೆಂಗಳೂರು ಜಿಲ್ಲಾ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಬೆಂಗಳೂರು, ಇದರ ನೌಕರರ ಪತ್ತಿನ ಸಹಕಾರ ಸಂಘ ನಿ., ಚಾಮರಾಜಪೇಟೆ, ಬೆಂಗಳೂರು–18, ಇದರ ಕಾರ್ಯದರ್ಶಿಗಳು.

**ಪ್ರತಿವಾದಿ:**

ಶ್ರೀ ಓ. ಲಿಂಗಯ್ಯ ಬಿನ್ ಲೇಟ್ ಕೆಂಪೇಗೌಡ, ನಂ.3770, ವೈದ್ಯನಾಥೇಶ್ವರ ನಿಲಯ 12ನೇ ಮುಖ್ಯ ರಸ್ತೆ, ವೃಷಭಾವತಿ ನಗರ, ಕಾಮಾಕ್ಷಿ ಪಾಳ್ಯ ಬೆಂಗಳೂರು–79

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103(1)ರ ಪ್ರಕಾರ ಸ್ಥಿರಾಸ್ತಿಯನ್ನು ಅವಾರ್ಡ್/ಆದೇಶಪೂರ್ವ ಜಪ್ತಿ**

ವಾದಿ ಸಹಕಾರ ಸಂಘವು ಕಾಯ್ದೆ ಕಲಂ 70 ರಡಿಯಲ್ಲಿ ಪ್ರತಿವಾದಿಯವರ ವಿರುದ್ಧ ದಾವಾ ಅರ್ಜಿ ಸಲ್ಲಿಸಿ ಪ್ರತಿವಾದಿಯವರು ಗೌರವ ಕಾರ್ಯದರ್ಶಿಯಾಗಿ ಅಧಿಕಾರ ದುರುಪಯೋಗಪಡಿಸಿಕೊಂಡು ರೂ. 8.89.003–40 ಗಳ ಹಣ ದುರುಪಯೋಗ ಮಾಡಿಕೊಂಡಿದ್ದಾರೆಂದು ವಿವರಿಸಲಾಗಿದೆ. ವಾದಿ ಸಂಘವು ಸದರಿ ದಾವಾ ಅರ್ಜಿಯಲ್ಲಿ ಮುಂದುವರೆದು, ಪ್ರತಿವಾದಿಯವರು ಕಾಮಗಾರಿ ವೆಚ್ಚದ ಬಗ್ಗೆ ಖರ್ಚು ಹಾಕಿದ ಬಾಬ್ತು ವಸೂಲಿಗಾಗಿ ರೂ. 6,83,003–40 ಮತ್ತು ಭೂ ದಾಖಲೆಮಾಡಿಸಿದ ಬಾಬ್ತು ಖರ್ಚು ವಸೂಲಿಗೆ ರೂ. 2,06,000–00 ಹೀಗೆ ಒಟ್ಟು ರೂ. 8,89,003–40 ಗಳನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಶಾಸನಬದ್ಧ ಲೆಕ್ಕಪರಿಶೋಧಕರು 1988–89 ರಿಂದ 1997–98 ನೇ ಸಾಲುಗಳವರೆಗಿನ ಲೆಕ್ಕಪರಿಶೋಧಿತ ವರದಿಗಳಲ್ಲಿ ವಿವರಿಸಿದ್ದಾರೆ. ಸಕಾರಣ, ಪ್ರತಿವಾದಿಯವರಿಂದ ಸದರಿ ಮೊತ್ತವನ್ನು ಶೇಕಡಾ 18ರ ಬಡ್ಡಿದರದಲ್ಲಿ ವಸೂಲಿ ಮಾಡಿಕೊಳ್ಳಲು ವಾದಿ ಸಹಕಾರ ಸಂಘಕ್ಕೆ ದಾವಾದೇಶ ನೀಡಬೇಕೆಂದು ವಿನಂತಿಸಲಾಗಿದೆ. ಸದರಿ ದಾವಾ ಪ್ರಕರಣವನ್ನು ಇತ್ಯರ್ಥಗೊಳಿಸಲು ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ಇಲಾಖಾ ಮಧ್ಯಸ್ಥಿಕೆಗಾರರಿಗೆ ಕಾಯ್ದೆ ಕಲಂ 71 (1) (ಸಿ) ರನ್ವಯ ವಹಿಸಲಾಗಿದೆ.

2) ವಾದಿ ಸಹಕಾರ ಸಂಘವು ಸದರಿ ಕಲಂ 70ರ ದಾವಾ ಅರ್ಜಿ ಸಲ್ಲಿಸಿದ ನಂತರ, ದಿನಾಂಕ:17.10.2004 ರಂದು ಕಾಯ್ದೆ ಕಲಂ 103ರಡಿಯಲ್ಲಿ ಪ್ರಮಾಣೀಕರಿಸಿದ ಅರ್ಜಿಯನ್ನು ಸಲ್ಲಿಸಿ. ಪ್ರತಿವಾದಿಯವರು ಸದರಿ ಅರ್ಜಿಯಲ್ಲಿ ಷೆಡ್ಯೂಲ್‌ನಲ್ಲಿ ವಿವರಿಸಿರುವ ಆಸ್ತಿಗಳನ್ನು ಪರಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದೇ ಇದ್ದಲ್ಲಿ, ವಾದಿ ಸಹಕಾರ ಸಂಘವು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯನ್ನನುಸರಿಸಿ ಈ ನ್ಯಾಯಾಲಯವು ಡಿಕ್ರಿ/ಅವಾರ್ಡ್ ನೀಡಿದರೂ ಕೂಡಾ, ಸದರಿ ಡಿಕ್ರಿ/ಅವಾರ್ಡ್‌ನನ್ವಯ ಪ್ರತಿವಾದಿಗಳಿಂದ ವಾದಿ ಸಹಕಾರ ಸಂಘಕ್ಕೆ ಬರಬೇಕಾದ ಮೊಬಲಗನ್ನು ವಸೂಲಿ ಮಾಡಿಕೊಳ್ಳಲು ಯಾವುದೇ ಬೇರೆ ಆಸ್ತಿಯಿಲ್ಲದೇ ಇರುವುದರಿಂದ ಡಿಕ್ರಿ/ದಾವಾದೇಶದ ಮೊತ್ತವನ್ನು ಪ್ರತಿವಾದಿಯವರಿಂದ ವಸೂಲು ಮಾಡಿಕೊಳ್ಳದ ಪರಿಸ್ಥಿತಿ ನಿರ್ಮಾಣ ಸಾಧ್ಯತೆ ಇದೆಯೆಂದು ವಿವರಿಸಿ, ಪ್ರತಿವಾದಿಯವರಿಗೆ ಸೇರಿದ ಷೆಡ್ಯೂಲ್ ಆಸ್ತಿಗಳನ್ನು ಮಾರಾಟ ಹಾಗೂ ಪರಭಾರೆ ಮಾಡದಂತೆ ಅವಾರ್ಡ್/ಆದೇಶಪೂರ್ವ ಜಪ್ತಿ ಆದೇಶ ನೀಡಬೇಕೆಂದು ವಿನಂತಿಸಲಾಗಿದೆ. ಪ್ರತಿವಾದಿಯವರು ಸದರಿ ಕಲಂ 103 ರ ಅರ್ಜಿಗೆ ಆಕ್ಷೇಪಣೆ ಸಲ್ಲಿಸಿ, ವಾದಿ ಸಹಕಾರ ಸಂಘವು ಪ್ರಸ್ತಾಪಿಸಿರುವ ರೂ. 8,89.003–40 ಗಳನ್ನು ವಾದಿ ಸಹಕಾರ ಸಂಘಕ್ಕೆ ಸಂಬಂಧಿಸಿದಂತೆ ಖರ್ಚು ಮಾಡಲಾಗಿದ್ದು ಲೆಕ್ಕಪರಿಶೋಧಕರು ತಮ್ಮ ವಿರುದ್ಧ ವಸೂಲಾತಿಗಾಗಿ ಸೂಚಿಸಿರುವುದು ಕಾನೂನು ಬಾಹಿರವಾಗಿದೆಯೆಂದು ವಿವರಿಸಿ, ಕಲಂ 103 ರ ಅರ್ಜಿಯನ್ನು ತಿರಸ್ಕರಿಸಬೇಕೆಂದು ವಿವರಿಸಿದ್ದಾರೆ.

3) ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರು ಸದರಿ ಕಲಂ 103 ರಡಿಯಲ್ಲಿ ವಾದಿ ಸಹಕಾರ ಸಂಘವು ಸಲ್ಲಿಸಿರುವ ಅರ್ಜಿಯ ಬಗ್ಗೆ ನಿರ್ಣಯ ಕೈಗೊಳ್ಳಲು ಸದರಿ ನ್ಯಾಯಾಲಯದ

ಅಧಿಕಾರ ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು, ಕಾರಣ ಪ್ರಸ್ತುತ ದಾವೆಯನ್ನು ಸದರಿ ಕಲಂ 103ರ ಅರ್ಜಿಯ ಬಗ್ಗೆ ತೀರ್ಮಾನ ಕೈಗೊಳ್ಳಲು, ದಿನಾಂಕ:16.9.2006ರ ಆದೇಶದನ್ವಯ ಈ ನ್ಯಾಯಾಲಯಕ್ಕೆ ಒಪ್ಪಿಸಲಾಗಿದೆ.

4) ಕಲಂ 103 ರಡಿಯಲ್ಲಿ ವಾದಿ ಸಹಕಾರ ಸಂಘವು ಸಲ್ಲಿಸಿರುವ ಅರ್ಜಿ ಮತ್ತು ದಾಖಲಾತಿಗಳನ್ನು ಹಾಗೂ ಪ್ರತಿವಾದಿಯವರ ಆಕ್ಷೇಪಣೆಗಳನ್ನು ಈ ನ್ಯಾಯಾಲಯವು ಕೂಲಂಕುಷವಾಗಿ ಪರಿಶೀಲಿಸಿದ್ದು, ಅರ್ಜಿಯಲ್ಲಿ ವಿವರಿಸಿರುವ ಅಂಶಗಳು ಮೇಲ್ನೋಟಕ್ಕೆ ನಿಜವೆಂದು ಕಂಡುಬರುತ್ತವೆ. ಅಲ್ಲದೇ. ಪ್ರತಿವಾದಿಗಳ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಆಸ್ತಿಗಳನ್ನು ಮಾರಾಟ ಅಥವಾ ಪರಭಾರೆ ಮಾಡದಂತೆ ತಡೆ ಹಿಡಿಯದಿದ್ದಲ್ಲಿ ವಾದಿ ಸಹಕಾರ ಸಂಘವು ಈ ದಾವಾ ಅರ್ಜಿಯಲ್ಲಿ ವಿನಂತಿಸಿರುವ ಕ್ಲೇಮಿಗೆ ಅವಾರ್ಡ್/ಡಿಕ್ರಿ ನೀಡಿದರೂ ಸಹಾ ಸದರಿ ಅವಾರ್ಡ್/ಡಿಕ್ರಿಯನ್ನು ವಸೂಲಾತಿಗಾಗಿ ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆಯೆಂಬ ಅಂಶವನ್ನು ಈ ನ್ಯಾಯಾಲಯವು ಪೂರ್ಣವಾಗಿ ಮನವರಿಕೆ ಮಾಡಿಕೊಂಡಿರುತ್ತದೆ. ಈ ಮೇಲೆ ವಿವರಿಸಿದ ಕಾರಣಗಳಿಂದ ಈ ಕೆಳಗಿನ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ತಿಳಿಸಿರುವ ಹಿನ್ನಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ಹಾಗೂ ಸರ್ಕಾರದ ಅಧಿಸೂಚನೆಯ ಕ್ರಮ ಸಂಖ್ಯೆ ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ-ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು, ಪ್ರತಿವಾದಿಯವರ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ಗಳಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಚಿಸಿದಲ್ಲಿ ರೂ. 8,89,003-40 ಗಳನ್ನು ಬಡ್ಡಿಸಹಿತ ಈ ನ್ಯಾಯಾಲಯದಲ್ಲಿ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ:04-06-2007 ರಂದು ಬೆಳಿಗ್ಗೆ 11.00 ಗಂಟೆಯೊಳಗಾಗಿ ಅಧಿಕೃತ ಚಲನ್/ರಶೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದ ನಿಗದಿತ ದಿನಾಂಕದೊಳಗೆ ನಗದು ಭದ್ರತೆಯನ್ನು ನೀಡಲು ವಿಫಲವಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ತೀರ್ಪಿಗೆ ಮುನ್ನ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಖರೀದಿಸುವ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದು, ಅಂತಹ ವ್ಯಕ್ತಿಗಳು ತೆಗೆದುಕೊಳ್ಳಬಹುದಾದ ಕ್ರಮವು ತೀರ್ಪಿಗೆ ಮುನ್ನ ಜಪ್ತಿ ಆದೇಶಕ್ಕೆ ಒಳಪಡುತ್ತದೆ. ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

ಪ್ರತಿವಾದಿಗೆ ಸೇರಿದ ಷೆಡ್ಯೂಲ್ ಸ್ವತ್ತಿನ ವಿವರ:

**SCHEDULE-I**

All the piece and parcel of the property bearing Khatha No. 3898 (New No. 3770) measuring 32 ½ 'X 40' situated at Sanegoravanahalli village, Yeshwanthapura Hobli, Bangalore North Taluk, bounded on:

East by - Private property
West by - Road
North by– Road
South by– Private property

**SCHEDULE-II**

All the piece and parcel of the property bearing Survey No. 117/4 measuring 35-guntas and survey No. 115/2 measuring 20-guntas and survey No. 126/1, measuring 24-guntas & 14/2 –0.02 guntas situated at Kanakapura Taluk, Harohalli Hobli, Kottagalu Grama, bounded on:

| 14/2 | 117/4 | 115/2 | 126/1 |
|---|---|---|---|
| OjiGowda | East by Govt. Tank | Govt. Tank | Chikputte Gowda |
| Siddalinge Gowda | West by Govt. Mountain | Road | Madegowda |
| Gomakkiah | North by Shivappa | Kempamma | Govt. Halla |
| Madegowda | South by Oji Gowda | Halla | MadeGowda |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:27-04-2007ರಂದು ನೀಡಲಾಗಿದೆ.

**ಬಿ.ಕೆ. ಯದುನಾಥ್**
ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು

ಪಿ.ಆರ್. 580

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ ರವರ ಕಛೇರಿ ನಡವಳಿಗಳು
ಗುನ್ನೆ ನಂ:07/2006-07. ದಿ:23.08.2006
ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ. ಬಾಗೇವಾಡಿ.

ನಂ:ಇಎಕ್ಸ್‌ಇ:ಬಿಜೆಪಿ:ಇಐಬಿ:ಡಿಟಿಸಿಆರ್:26/2006-07, ದಿ:23.2.2007

ಉಪಸ್ಥಿತರು: ಕೆ.ಆರ್. ಗೌಡ್ರ
ಪ್ರಾಧಿಕೃತ ಅಧಿಕಾಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ.
ಬಿಜಾಪೂರ ಜಿಲ್ಲೆ, ಬಿಜಾಪೂರ

| ಫಿರ್ಯಾಧಿದಾರರು | | ಆರೋಪಿತರು |
|---|---|---|
| ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ. ಬಾಗೇವಾಡಿ | ವಿರುದ್ಧ | ಇಲ್ಲಾ |

ವಾಹನದ ಮಾಲೀಕರು
ಡಾ:ಬಿ.ಎಸ್. ಸಂದಿಮನಿ ಸಾ: ಮಸೂತಿ,

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 22.8.2006 ರಂದು ಬ.ಬಾಗೇವಾಡಿ ತಾಲ್ಲೂಕು ಜಾರಿ ಮತ್ತು ತನಿಖೆ ಕಛೇರಿಯ ಅಬಕಾರಿ ಉಪ ನಿರೀಕ್ಷಕರು, ಅಬಕಾರಿ ಸಿಬ್ಬಂದಿಯವರು ಮತ್ತು ಪಂಚ ಜನರು ಮಲಘಾಣ-ಮಸೂತಿ ರಸ್ತೆಯ ಬದಿಯಲ್ಲಿ ರಸ್ತೆ ಕಾವಲು ಮಾಡುತ್ತಾ ನಿಂತಾಗ ಒಂದು ದ್ವಿಚಕ್ರ ವಾಹನ ಬರುವುದನ್ನು ಕಂಡರು. ರಸ್ತೆ ಮೇಲೆ ವಾಹನ ಚಾಲಕನು ಸಮವಸ್ತ್ರದಲ್ಲಿದ್ದ ಅಬಕಾರಿ ಸಿಬ್ಬಂದಿಯನ್ನು ಕಂಡು ದ್ವಿಚಕ್ರ ವಾಹನವನ್ನು ಬಿಟ್ಟು ಓಡಿ ಹೋಗಿರುತ್ತಾನೆ. ಆಗ ಸಮಯ ದಿನಾಂಕ:23.8.2006 ರ ನಸುಕಿನ ಜಾವ 2-00 ಗಂಟೆ ಆಗಿರುತ್ತದೆ. ಅಬಕಾರಿ ಸಿಬ್ಬಂದಿಯವರು ಕತ್ತಲಲ್ಲಿ ಓಡಿ ಹೋದ ಆರೋಪಿತನನ್ನು ಹಿಡಿಯಲು ಪ್ರಯತ್ನಿಸಿದರೂ ಪರಾರಿಯಾಗಿರುತ್ತಾನೆ. ನಂತರ ಅಬಕಾರಿ ಸಿಬ್ಬಂದಿಯವರು ಪಂಚರೊಂದಿಗೆ ದ್ವಿಚಕ್ರ ವಾಹನ ಬಿದ್ದ ಸ್ಥಳಕ್ಕೆ ಬಂದು ನೋಡಲಾಗಿ ವಾಹನದ ನೋಂದಣಿ ಸಂಖ್ಯೆ ಕೆಎ-28-ಹೆಚ್-1723 ಇರುತ್ತದೆ. ಸದರಿ ವಾಹನದ ಪಕ್ಕದಲ್ಲಿ ಬಿದ್ದಿದ ಕರಿ ಬಣ್ಣದ ಟೂಬನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಕಗ್ಗ ವ ಹುಳುಚು ವಾಸನೆಯ ಅಂದಾಜು 40 ಲೀಟರ್ ಕಳ್ಳಭಟ್ಟಿ ಸಾರಾಯಿ ಇರುವುದು ಪತ್ತೆಯಾಗಿರುತ್ತದೆ. ನಂತರ ಪಂಚರ ಸಮಕ್ಷಮ ಸದರಿ ಟೂಬಿನಿಂದ 180 ಎಂಎಲ್‌ದಷ್ಟು ಕಳ್ಳಭಟ್ಟಿ ಸಾರಾಯಿಯನ್ನು ರಸಾಯನಿಕ ಪರೀಕ್ಷೆಗೆ ತೆಗೆದು ಅದನ್ನು ಶೀಲು ಮಾಡಿ ಪಂಚರ ಸಹಿ ಮಾಡಿದ ಚೀಟಿಯನ್ನು ಅಂಟಿಸಿರುತ್ತಾರೆ. ಮತ್ತು ಕಳ್ಳಭಟ್ಟಿ ಸಾರಾಯಿ ಟೂಬಗೂ ಶೀಲು ಮಾಡಿ ಪಂಚ ಜನರು ಹಾಗೂ ಅಬಕಾರಿ ಅಧಿಕಾರಿಗಳು ಸಹಿ ಮಾಡಿದ ಚೀಟಿಗಳನ್ನು ಅಂಟಿಸಿರುತ್ತಾರೆ. ಕಳ್ಳಭಟ್ಟಿ ಸಾರಾಯಿ ಟೂಬನ್ನು ಮತ್ತು ಸದರಿ ದ್ವಿಚಕ್ರ ವಾಹನವನ್ನು ಪಂಚನಾಮೆಯಡಿಯಲ್ಲಿ ಜಪ್ತು ಮಾಡಿ ತಮ್ಮ ತಾಬಾಕ್ಕೆ ತೆಗೆದುಕೊಂಡು ಮೊಕದ್ದಮೆ ದಾಖಲಿಸಿ, ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ ಬ. ಬಾಗೇವಾಡಿಯಲ್ಲಿ ಸರ್ಕಾರಿ ತರ್ಫೆ ಪಿರ್ಯಾಧಿಯನ್ನು ಸಲ್ಲಿಸಿರುತ್ತಾರೆ. ಪ್ರಥಮ ವರ್ತಮಾನ ವರದಿ ರಸಾಯನಿಕ ತಜ್ಞರ ವರದಿ ಮತ್ತು ಪಂಚನಾಮೆ ವರದಿಗಳೊಂದಿಗೆ ಈ ಕಚೇರಿಗೆ ಮುಂದಿನ ಕ್ರಮಕ್ಕಾಗಿ ವರದಿ ಸಲ್ಲಿಸಿರುತ್ತಾರೆ.

ನಂತರ ಪಿರ್ಯಾಧಿದಾರರು ರಸಾಯನಿಕ ಮಾದರಿಯನ್ನು ರಸಾಯನಿಕ ತಜ್ಞರಿಗೆ ಕಳುಹಿಸಿ ವರದಿ ಪಡೆದಿರುತ್ತಾರೆ. ಸದರಿ ರಸಾಯನಿಕ ತಜ್ಞರ ವರದಿಯಲ್ಲಿ ಮದ್ಯಸಾರದ 74.8 ಅಂಶವಿದ್ದು, ಇದು ಮಾನವ ಸೇವನೆಗೆ ಯೋಗ್ಯವಿರುವುದಿಲ್ಲವೆಂದು ದೃಢಪಡಿಸಿರುತ್ತಾರೆ, ನಂತರ ಈ ಪ್ರಾಧಿಕಾರದಿಂದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿಜಾಪೂರ ಇವರಿಗೆ ಜಪ್ತು ಮಾಡಿದ ವಾಹನದ ಬಿ-ಎಕ್ಸ್‌ಟ್ರ್ಯಾಕ್ಟ ಕಳುಹಿಸಲು ಕೋರಿ ಪತ್ರ ಬರೆಯಲಾಗಿದೆ. ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಸದರಿ ವಾಹನದ ಬಿ-ಎಕ್ಸ್‌ಟ್ರ್ಯಾಕ್ಟನಲ್ಲಿ ದ್ವಿಚಕ್ರ ವಾಹನ ಸಂಖ್ಯೆ ಕೆಎ-28-ಹೆಚ್-1723 ಮತ್ತು ವಾಹನ ಮಾಲೀಕರ ಹೆಸರು ಡಾ: ಬಸಪ್ಪ, ಶಿವಪ್ಪ ಸಂಧಿಮನಿ ಸಾ: ಮಸೂತಿ, ತಾ: ಬ. ಬಾಗೇವಾಡಿ ಅಂತಾ ತಿಳಿಸಿರುತ್ತಾರೆ.

ದಿನಾಂಕ: 20.9.2006 ರಂದು ಈ ಪ್ರಾಧಿಕಾರದಿಂದ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ಪ್ರಕಾರ ಕಾರಣ ಕೇಳುವ ನೋಟಿಸನ್ನು ಸದರಿ ವಾಹನ ಮಾಲೀಕರಾದ ಡಾ: ಬಸಪ್ಪ ಶಿವಪ್ಪ ಸಂಧಿಮನಿ ಸಾ: ಮಸೂತಿ, ತಾ: ಬ. ಬಾಗೇವಾಡಿ ಇವರಿಗೆ ನೋಟಿಸು ಹೊರಡಿಸಲಾಯಿತು., ಸದರಿ ನೋಟಿಸನ್ನು ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ. ಬಾಗೇವಾಡಿ ಇವರು ಸದರಿ ವಾಹನ ಮಾಲೀಕರಿಗೆ ಜಾರಿ ಮಾಡಿ ಈ ಕಚೇರಿಗೆ ಸ್ವೀಕೃತಿ ಪತ್ರ ಸಲ್ಲಿಸಿರುತ್ತಾರೆ. ದಿನಾಂಕ:27.12.2006 ರಂದು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ಕಲಂ 43 (ಎ) ಪ್ರಕಾರ ಈ ಪ್ರಾಧಿಕಾರವು ದಿನಾಂಕ:27.12.2006 ರಂದು ವಿಚಾರಣೆ ನಡೆಸಲಾಗುವುದೆಂದು ಎಲ್ಲ ಸಾಕ್ಷಿದಾರರಿಗೆ ನೋಟಿಸು ತೆಗೆಯಲಾಯಿತು.

ದಿನಾಂಕ: 18.1.2007 & 21.2.2007 ರಂದು ವಿಚಾರಣೆಯನ್ನು ನಡೆಸಲಾಯಿತು ಅಭಿಯೋಗದ ಪರವಾಗಿ ಸಾಕ್ಷಿದಾರರಾದ ಪ್ರಾ.ಸಾ-1, ಪ್ರಾ.ಸಾ-2 ವಿಚಾರಣೆ ಮಾಡಿ ನಾಲ್ಕು (04) ದಾಖಲಾತಿಗಳನ್ನು ಮತ್ತು ಎರಡು ಮುದ್ದೇಮಾಲುಗಳನ್ನು ಗುರುತಿಸಿದ್ದು ಇರುತ್ತದೆ.

ಪ್ರಾ.ಸಾ-1 ಇವರು ಸಾಕ್ಷಿ ನುಡಿಯುತ್ತ ದಿನಾಂಕ: 22.8.2006 ರಂದು ಪಂಚ ಜನರನ್ನು ತಮ್ಮ ಕಛೇರಿಗೆ ಕರೆಯಿಸಿಕೊಂಡು ವಿಷಯವನ್ನು ತಿಳಿಸಿ ಪಂಚರೊಂದಿಗೆ ಮಲಘಾಣ-ಮಸೂತಿ ರಸ್ತೆಯಲ್ಲಿ ರಸ್ತೆ ಕಾವಲು ನಿಂತುಕೊಂಡರು, ಆ ಸಮಯದಲ್ಲಿ ಒಂದು ದ್ವಿಚಕ್ರ ವಾಹನ ಬರುವುದನ್ನು ಅಬಕಾರಿ ಅಧಿಕಾರಿಗಳು ಹಾಗೂ ಪಂಚ ಜನರು ನೋಡುತ್ತಿರುವಾಗ ದ್ವಿಚಕ್ರ ವಾಹನದ ಚಾಲಕನು ಸಮವಸ್ತ್ರದಲ್ಲಿರುವ ಸಿಬ್ಬಂದಿ ಜನರನ್ನು ಕಂಡು ಓಡಿ ಹೋಗಿರುತ್ತಾನೆಂದು ಪಿರ್ಯಾಧಿದಾರರು ಸಾಕ್ಷಿ ನುಡಿದಿರುತ್ತಾರೆ. ನಂತರ ಸಿಬ್ಬಂದಿ ಜನರು ಆರೋಪಿತನನ್ನು ಹಿಡಿಯಲು ಪ್ರಯತ್ನಿಸಿದರು ಆರೋಪಿತನು ಪರಾರಿ ಆಗಿರುತ್ತಾರೆ. ನಂತರ ಪಂಚರೊಂದಿಗೆ ದ್ವಿಚಕ್ರ ವಾಹನ ಬಿದ್ದ ಸ್ಥಳಕ್ಕೆ ಬಂದು ನೋಡಲಾಗಿ ವಾಹನದ ನೋಂದಣಿ ಸಂಖ್ಯೆ ಕೆಎ-28-ಹೆಚ್-1723 ಚೆಸ್ಸಿ ನಂ:1505 ಎಫ್ 508132 ಮತ್ತು ಇಂಜಿನ್ ನಂ:1505 ಎಂ551364 ಇದ್ದು, ಸದರಿ ವಾಹನದ ಪಕ್ಕದಲ್ಲಿ ಬಿದ್ದಿದ

ಕರಿ ಬಣ್ಣದ ಟ್ಯೂಬನ್ನು ಸಿಬ್ಬಂದಿ ಮತ್ತು ಪಂಚರ ಸಮಕ್ಷಮ ಬಿಚ್ಚಿ ನೋಡಲಾಗಿ ಅದರಲ್ಲಿ ಅಂದಾಜು 40 ಲೀಟರ್ ಕಳ್ಳಭಟ್ಟಿ ಸಾರಾಯಿ ಇದ್ದು ಅದರಿಂದ ಕಗ್ಗ ವ ಹುಳುಚು ವಾಸನೆ ಬರುತ್ತಿತ್ತು. ನಂತರ ಸದರಿ ಟ್ಯೂಬಿನಿಂದ ಒಂದು 180 ಮಿಲಿಯ ಬಾಟಲಿಯಲ್ಲಿ ರಸಾಯನಿಕ ಪರೀಕ್ಷೆಗೆ ತೆಗೆದು ಅವುಗಳನ್ನು ಶೀಲು ಮಾಡಿ ತಮ್ಮ ವ ಪಂಚರ ಸಹಿ ಮಾಡಿದ ಚೀಟಿಯನ್ನು ಅಂಟಿಸಿ ಸರ್ಕಾರಿ ಶೀಲಿನಿಂದ ಶೀಲ್ ಮಾಡಿದರು. ಆಗ ಸಮಯ ದಿ:23.8.2006ರ ನಸುಕಿನ ಜಾವ 2.00 ಗಂಟೆಯಾಗಿತ್ತು. ನಂತರ ಘಟನೆ ನಡೆದ ಸ್ಥಳದಲ್ಲಿ ರಾತ್ರಿ 2.00 ಗಂಟೆಯಿಂದ 2.30 ರ ವರೆಗೆ ಪಂಚರ ಸಮಕ್ಷಮ ಮಾಲು ಜಪ್ತು ಪಂಚನಾಮೆ ಬರೆಯಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ. ಸದರಿ ಪಂಚನಾಮೆಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ ಪಿ-2 ಎಂದು ಗುರುತಿಸಿರುತ್ತಾರೆ, ಅದರ ಮೇಲಿನ ತಮ್ಮ ಸಹಿಯನ್ನು ನಿಶಾನೆ-ಪಿ2 (ಎ) ಎಂದು ಗುರುತಿಸಿರುತ್ತಾರೆ. 40 ಲೀಟರ್ ಕಳ್ಳಭಟ್ಟಿ ಸಾರಾಯಿ ತುಂಬಿದ ಕರಿ ಬಣ್ಣದ ಟ್ಯೂಬನ್ನು ಮತ್ತು ದ್ವಿಚಕ್ರವಾಹನವನ್ನು ಪಂಚರ ಸಹಿ ಮತ್ತು ತಮ್ಮ ಸಹಿನಿಸಿದ ಚೀಟಿಗಳನ್ನು ಅಂಟಿಸಿ ತಮ್ಮ ತಾಬಾಕ್ಕೆ ತೆಗೆದುಕೊಂಡು. ಸದರಿ ಜಪ್ತಾದ ಮುದ್ದೇಮಾಲನ್ನು ಈಗ ನೋಡುತ್ತಿದ್ದು, ಅವುಗಳನ್ನು ಎಂಓ-01 ಮತ್ತು ದ್ವಿಚಕ್ರ ವಾಹನವನ್ನು ಎಂಓ-2 ಎಂದು ಗುರುತಿಸಿರುತ್ತಾರೆ. ಮಾಲು ಜಪ್ತು ಪಂಚನಾಮ ಮಾಡಿ ಗುನ್ನೆ ನಂ:07/2006-07ರ ಅಡಿಯಲ್ಲಿ ಪ್ರಥಮ ವರ್ತಮಾನ ವರದಿಯನ್ನು ತಯಾರಿಸಿರುತ್ತಾರೆ. ಸದರಿ ಪ್ರಥಮ ವರ್ತಮಾನ ವರದಿಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ-ಪಿ-1 ಅದರಲ್ಲಿ ಇರುವ ತಮ್ಮ ಸಹಿಯನ್ನು ನಿಶಾನೆ-ಪಿ1(ಎ) ಎಂದು ಗುರುತಿಸಿರುತ್ತಾರೆ. ನಂತರ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ ಬ. ಬಾಗೇವಾಡಿಯಲ್ಲಿ ಪಂಚನಾಮೆಯೊಂದಿಗೆ ಪ್ರಥಮ ವರ್ತಮಾನ ವರದಿ ಸಂಖ್ಯೆ 07/2006-07 ಗುನ್ನೆ ದಾಖಲು ಮಾಡಿದ ಬಗ್ಗೆ ಪಿರ್ಯಾಧಿಯನ್ನು ಸಲ್ಲಿಸಿರುತ್ತಾರೆ ಸದರಿ ಪಿರ್ಯಾಧಿಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ-ಪಿ-3 ಮತ್ತು ಅದರ ಮೇಲಿನ ತಮ್ಮ ಸಹಿಯನ್ನು ನಿಶಾನೆ-ಪಿ-3(ಎ) ಎಂದು ಗುರುತಿಸಿರುತ್ತಾರೆ.

ಸದರಿ ಪ್ರಕರಣ ಮುಂದಿನ ತನಿಖೆಯ ಕುರಿತು ದಿನಾಂಕ:10.9.2006 ರಂದು ತಮ್ಮ ಕಛೇರಿಯ ಮುಖ ಪತ್ರದೊಂದಿಗೆ ಸದರಿ ಗುನ್ನೆಯಲ್ಲಿ 180 ಮಿಲಿಯ ಕಳ್ಳಭಟ್ಟಿ ಸಾರಾಯಿ ಬಾಟಲಿಯನ್ನು ತಮ್ಮ ಕಛೇರಿಯ ಅಬಕಾರಿ ರಕ್ಷಕರಾದ ಶ್ರೀ ಬಿ.ಪಿ. ತಳಕೇರಿ ಇವರ ಜೊತೆಗೆ ಮುಖ್ಯ ರಸಾಯನಿಕ ತಜ್ಞರು (ಅಬಕಾರಿ) ಬೆಂಗಳೂರು ಇವರಿಗೆ ರಸಾಯನಿಕ ಪರೀಕ್ಷೆಗಾಗಿ ಕಳುಹಿಸಿಕೊಟ್ಟು ರಸಾಯನಿಕ ತಜ್ಞರಿಂದ ಪ್ರಮಾಣ ಪತ್ರ ಪಡೆದುಕೊಂಡಿರುತ್ತಾರೆ. ಸದರಿ ರಸಾಯನಿಕ ಪ್ರಮಾಣ ಪತ್ರದಲ್ಲಿ ಜಪ್ತಾದ ಕಳ್ಳಭಟ್ಟಿ ಸಾರಾಯಿಯಲ್ಲಿ 74.8 ಯು.ಪಿ. ಮದ್ಯಸಾರದ ಅಂಶವಿದ್ದು, ಇದು ಮಾನವನ ಸೇವನೆಗೆ ಯೋಗ್ಯ ಇರುವುದಿಲ್ಲಾ ಎಂದು ತಿಳಿಸಿರುತ್ತಾರೆ ಸದರಿ ರಸಾಯನಿಕ ಪ್ರಮಾಣ ಪತ್ರ ಈಗ ನೋಡುತ್ತಿದ್ದು ಅದನ್ನು ನಿಶಾನೆ-ಪಿ-4 ಎಂದು ಗುರುತಿಸಿರುತ್ತಾರೆ. ಸಾಕ್ಷಿದಾರರ ಸಾಕ್ಷಿ ಹೇಳುವ ಸಮಯದಲ್ಲಿ ವಾಹನ ಮಾಲೀಕರು ಹಾಜರು ಇಲ್ಲದಿರುವುದರಿಂದ ಯಾವುದೇ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು. ವಾಹನದ ಮಾಲೀಕರು ದಿನಾಂಕ:2.1.2003 ರಂದು ಶ್ರೀ ಅಪ್ಪಾಶ್ಯಾ ಬೀಲು ಪವಾರ ಸಾ: ಕೂಡಗಿ ಇವರಿಗೆ ಮಾರಾಟ ಮಾಡಿ ಅವರಿಂದ ಬಾಂಡ ಪೇಪರದ ಮೇಲೆ ಬರೆದುಕೊಂಡಿರುತ್ತೇನೆ. ಈಗ ವಾಹನಕ್ಕೂ ಹಾಗೂ ತಮಗೂ ಯಾವುದೇ ಸಂಬಂಧವಿರುವುದಿಲ್ಲವೆಂದು ಅಬಕಾರಿ ಉಪ ನಿರೀಕ್ಷಕರು ಬ. ಬಾಗೇವಾಡಿ ಇವರಿಗೆ ಬಾಂಡ ಪೇಪರದ ಜೆರಾಕ್ಸ ಪ್ರತಿಯೊಂದಿಗೆ ಲಿಖಿತವಾಗಿ ವಿವರಣೆಯನ್ನು ನೀಡಿರುತ್ತಾರೆ ಸದರಿ ಹೇಳಿಕೆ ಪ್ರತಿಯನ್ನು ಅಬಕಾರಿ ಉಪ ನಿರೀಕ್ಷಕರು ಬ. ಬಾಗೇವಾಡಿ ಇವರು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತಾರೆ. ಸದರಿ ಲಿಖಿತ ಪತ್ರವನ್ನು ಪರಿಶೀಲಿಸಲಾಗಿ ಸದರಿ ವಾಹನ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಣಿಕೆಯಲ್ಲಿ ತೊಡಗಿರುವುದಕ್ಕೆ ಪುಷ್ಠಿ ನೀಡುತ್ತದೆ.

ಪ್ರಾ.ಸಾ-2 ಇವರು ಪಂಚ ಸಾಕ್ಷಿಯಾಗಿದ್ದು, ಸಾಕ್ಷಿ ನುಡಿಯುತ್ತಾ ದಿನಾಂಕ:22.8.2006 ರ ಸಮಯ ಸಾಯಂಕಾಲ 5.30 ಗಂಟೆಗೆ ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ. ಬಾಗೇವಾಡಿ ತಾಲ್ಲೂಕು ಇವರು ತಮ್ಮನ್ನು ಕಛೇರಿಗೆ ಕರೆಯಿಸಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಹಾಗೂ ಮಾರಾಟವನ್ನು ತಡೆಯುವ ಉದ್ದೇಶದಿಂದ ಅಬಕಾರಿ ಅಧಿಕಾರಿಗಳು ಹಾಗೂ ಸಿಬ್ಬಂದಿ ಜನರು ರಸ್ತೆಗಾವಲು ಮಾಡಲು ಹೊರಟಿದ್ದು ಒಂದು ವೇಳೆ ಅಪರಾಧ ಪತ್ತೆಯಾದಲ್ಲಿ ತಾವುಗಳು ಪಂಚರಾಗಿ ಪಂಚನಾಮೆಯನ್ನು ನಡೆಸಿಕೊಡಬೇಕು ಎಂದು ಕೇಳಿಕೊಂಡರು, ಆಗ ಅದಕ್ಕೆ ಒಪ್ಪಿಕೊಂಡು ಅಬಕಾರಿ ಅಧಿಕಾರಿಗಳ ಜೊತೆ ಹೊರಟು ಬ. ಬಾಗೇವಾಡಿಯಿಂದ ರಸ್ತೆ ಕಾವಲು ಮಾಡುತ್ತಾ ಮುತ್ತಗಿ ಕ್ರಾಸ್, ಮಟ್ಯಾಳ ಕ್ರಾಸ್ ಮಾರ್ಗವಾಗಿ ಮಲಘಾಣ-ಮಸೂತಿ ರಸ್ತೆಯಲ್ಲಿ ಬಂದು ನಿಂತಿಕೊಂಡರು, ಆಗ ಸಮಯ ರಾತ್ರಿ 10.00 ಗಂಟೆಯಾಗಿತ್ತು. ರಸ್ತೆಗಾವಲು ಮಾಡುತ್ತಿರುವಾಗ ದೂರದಲ್ಲಿ ಒಂದು ದ್ವಿಚಕ್ರ ವಾಹನ ಬರುತ್ತಿರುವುದನ್ನು ಕಂಡು ಸಂಶಯಗೊಂಡ ಅಧಿಕಾರಿಗಳು ಹಾಗೂ ಸಿಬ್ಬಂದಿ ರಸ್ತೆ ಮೇಲೆ ಬಂದಾಗ ಸಮವಸ್ತ್ರದಲ್ಲಿದ್ದ ಅಧಿಕಾರಿಗಳ ಹಾಗೂ ಸಿಬ್ಬಂದಿಯನ್ನು ವಾಹನದ ಹೆಡ್ ಲೈಟ್ ಬೆಳಕಿನಲ್ಲಿ ಕಂಡು ವಾಹನ ಬಿಟ್ಟು ಓಡಿ ಹೋದನು. ಆಗ ಸಿಬ್ಬಂದಿ ಅವನನ್ನು ಬೆನ್ನಟ್ಟಿ ಹಿಡಿಯಲು ಪ್ರಯತ್ನಿಸಿದರು. ಆದರೆ ಆ ವ್ಯಕ್ತಿಯು ಕತ್ತಲಲ್ಲಿ ಪರಾರಿಯಾದನು. ಆಗ ಅಧಿಕಾರಿಗಳೊಂದಿಗೆ ವಾಹನ ಬಿದ್ದ ಸ್ಥಳಕ್ಕೆ ಬಂದು ನೋಡಲಾಗಿ ಅಲ್ಲಿ ಒಂದು ದ್ವಿಚಕ್ರ ವಾಹನವಿದ್ದು ಅದರ ನೋಂದಣಿ ಸಂಖ್ಯೆ:ಕೆಎ-28-ಹೆಚ್-1723 ಇದ್ದು, ವಾಹನದ ಪಕ್ಕದಲ್ಲಿ ಬಿದ್ದಿದ ಕರಿ ಬಣ್ಣದ ಮೋಟಾರು ಟ್ಯೂಬನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಕಳ್ಳಭಟ್ಟಿ ಸಾರಾಯಿ ಇದ್ದು ಅದರಿಂದ ಕಗ್ಗ ವ ಹುಳುಚು ವಾಸನೆ ಬರುತ್ತಿತ್ತು. ಅಂದಾಜು 40 ಲೀಟರ್ ಕಳ್ಳಭಟ್ಟಿ ಸಾರಾಯಿ ತುಂಬಿತ್ತು. ಆಗ ಅಧಿಕಾರಿಗಳು ಸದರಿ ಟ್ಯೂಬಿನಿಂದ 180 ಎಂ.ಎಲ್ ದಷ್ಟು ಕಳ್ಳಭಟ್ಟಿ ಸಾರಾಯಿಯನ್ನು ರಸಾಯನಿಕ ಪರೀಕ್ಷೆಗಾಗಿ ತೆಗೆದು ಅದನ್ನು ಶೀಲು ಮಾಡಿ ಅದಕ್ಕೆ ತಮ್ಮ ವ ಅಧಿಕಾರಿಗಳ ಸಹಿನಿಸಿದ ಚೀಟಿಗಳನ್ನು ಅಂಟಿಸಿ ಸರ್ಕಾರಿ ಶೀಲಿನಿಂದ ಶೀಲು ಮಾಡಿದರು. ನಂತರ ಟ್ಯೂಬನ್ನು ಕಟ್ಟಿ ಅದಕ್ಕೆ ತಮ್ಮ ವ ಅಧಿಕಾರಿಗಳ ಸಹಿನಿಸಿದ ಚೀಟಿಗಳನ್ನು ಅಂಟಿಸಿದರು. ದ್ವಿಚಕ್ರ ವಾಹನ ಮತ್ತು ಮುದ್ದೇಮಾಲನ್ನು ಅಧಿಕಾರಿಗಳು ತಮ್ಮ ತಾಬಾಕ್ಕೆ ತೆಗೆದುಕೊಂಡರು. ಎಂದು ಈ ಪಂಚ ಸಾಕ್ಷಿದಾರರು ಸಾಕ್ಷಿ ನುಡಿದಿರುತ್ತಾರೆ. ಸದರಿ ಜಪ್ತಾದ ಮುದ್ದೇಮಾಲನ್ನು ಈಗ ನೋಡುತ್ತಿದ್ದು, ಅವುಗಳನ್ನು ಎಂಓ-01 ಮತ್ತು ದ್ವಿಚಕ್ರ ವಾಹನವನ್ನು ಎಂಓ-2 ಎಂದು ಗುರುತಿಸಿರುತ್ತಾರೆ. ಗುನ್ನೆ ಘಟಿಸಿದ ಸ್ಥಳದಲ್ಲಿಯೇ ಮಾಲು ಜಪ್ತು ಪಂಚನಾಮೆಯನ್ನು ಸಮಯ 23.8.2006 ರ ನಸುಕಿನ ಜಾವ 2.00 ರಿಂದ 2.30 ರ ವರೆಗೆ ಟಾರ್ಚ್ ಬೆಳಕಿನಲ್ಲಿ ಬರೆಯಲಾಯಿತು. ಸದರಿ ಪಂಚನಾಮೆಯನ್ನು ಈಗ ನೋಡುತ್ತಿದ್ದು ಅದರಲ್ಲಿ ಇರುವ ತಮ್ಮ ಸಹಿಯನ್ನು

ನಿಶಾನೆ-ಪಿ-2(ಬಿ) ಎಂದು ಗುರುತಿಸಿರುತ್ತಾರೆ. ಸದರಿ ಸಾಕ್ಷಿದಾರರ ಹೇಳಿಕೆಯ ಸಮಯದಲ್ಲಿ ವಾಹನ ಮಾಲೀಕರು ಹಾಜರು ಇಲ್ಲದಿರುವುದರಿಂದ ಯಾವುದೇ ಪಾಟಿ ಸವಾಲು ಇಲ್ಲವೆಂದು ಪರಿಗಣಿಸಲಾಯಿತು. ಈ ಪಂಚ ಸಾಕ್ಷಿದಾರನು ಅಭಿಯೋಗದ ಪರವಾಗಿ ಸಾಕ್ಷಿ ನುಡಿದಿದ್ದರಿಂದ ವಾಹನವು ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಮಾಡುವುದರಲ್ಲಿ ತೊಡಗಿರುವುದಕ್ಕೆ ಪುಷ್ಠಿ ನೀಡುತ್ತದೆ.

**ಮೊದಲನೇ ವಿವಾದಾಂಶ:**

ದಿನಾಂಕ:23.8.2006 ರಂದು ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿದೆಯೇ? ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32,34 ರೀತ್ಯಾ ಅಪರಾಧವಾಗಿದೆಯೇ ? ಅಥವಾ ಇಲ್ಲಾ?

**ಎರಡನೇ ವಿವಾದಾಂಶ:**

ಸದರಿ ವಾಹನದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವ ಬಗ್ಗೆ ತನ್ನ ತಿಳುವಳಿಕೆಗೆ ಬಾರದೇ ಅಥವಾ ತಾನು ಶಾಮೀಲಾಗದೇ ನಡೆದಿದೆ ಎಂಬುದರ ಬಗ್ಗೆ ಅರ್ಜಿದಾರನಾಗಲಿ ಅಥವಾ ವಾಹನ ಚಾಲಕರಾಗಲೀ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲಾ?

**ಮೂರನೇಯ ವಿವಾದಾಂಶ:**

ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಿಕ್ಕೆ ಯೋಗ್ಯವಾಗಿದೆಯೇ? ಅಥವಾ ಇಲ್ಲಾ?

**ಮೊದಲನೆಯ ವಿವಾದಾಂಶಕ್ಕೆ ಉತ್ತರ-ಸಕಾರಾತ್ಮಕ (ಹೌದು):**

ಪ್ರಾಶ್ಯೂಕೆಶನ್ ಸಾಕ್ಷಿ ನುಡಿದ ಪಿರ್ಯಾಧಿದಾರರು ನೀಡಿರುವ ಹೇಳಿಕೆಯನ್ನು ಗಮನಿಸಿದಾಗ ಮಹಜರದಲ್ಲಿ ಇರುವ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ಪಂಚರ ಸಾಕ್ಷಿಯು ಕೂಡಾ ಪಿರ್ಯಾಧಿಯ ಸಾಕ್ಷಿಗೆ ಪೂರಕವಾಗಿದೆ. ಪ್ರಕರಣದಲ್ಲಿ ಆರೋಪಿಸಿರುವ ಅಂಶವಾದ ಸದರಿ ವಾಹನದಲ್ಲಿ ಸಾಗಾಣಿಕೆ ಮಾಡಲ್ಪಟ್ಟಿದ್ದು ಕಳ್ಳಭಟ್ಟಿ ಸಾರಾಯಿ ಎಂಬುದು ರಸಾಯನಿಕ ವಿಶ್ಲೇಷಣೆಯ ವರದಿಯಿಂದ ದೃಢಪಟ್ಟಿರುತ್ತದೆ. ಸದರಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಗೆ ಸಂಬಂಧಪಟ್ಟ ದಾಖಲಾತಿಗಳು ವಾಹನದಲ್ಲಿ ಇಲ್ಲದಿರುವ ಅಂಶವನ್ನು ಗಮನಿಸಿದಾಗ ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದೆ.

ಎರಡನೇಯ ವಿವಾದಾಂಶಕ್ಕೆ **ಉತ್ತರ-ಇಲ್ಲಾ:**

ಮೊದಲನೆಯ ವಿವಾದಾಂಶದಿಂದ ಪಡೆದ ಉತ್ತರದಲ್ಲಿ ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದ್ದು, ಈ ಪ್ರಕರಣವು ಸಂಭವಿಸಿದ ಸಮಯದಲ್ಲಿ ಆರೋಪ ವಾಹನದ ಚಾಲಕನ ತಿಳುವಳಿಕೆಯಿಂದ ಹಾಗೂ ಈತನ ಶಾಮೀಲಿನಿಂದಲೇ ಸದರಿ ವಾಹನದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ರುಜುವಾತಾಗಿದ್ದು. ವಾಹನದ ಮಾಲೀಕನಿಂದ ಅಥವಾ ಸದರಿ ವಾಹನದ ಚಾಲಕನಿಂದಲೂ ಅವನು ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುತ್ತದೆ ಎಂಬುದು ಸಂದೇಹಾತೀತವಾಗಿ ರುಜುವಾತುವಾಗಿದೆ. ಇದನ್ನು ಅಲ್ಲಗಳೆಯಲು ವಾಹನ ಮಾಲೀಕನು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲಾ ಮತ್ತು ತನ್ನ ಪರ ಯಾವುದೇ ಸಾಕ್ಷ್ಯಾಧಾರಗಳನ್ನು ಸಹ ನೀಡಿರುವುದಿಲ್ಲಾ.

ನಿಯಮ 43 (ಬಿ) (2) ರನ್ವಯ ಸ್ವತಃ ವಾಹನದ ಮಾಲೀಕ ಅಥವಾ ಅವರ ಪ್ರತಿನಿಧಿ ಮತ್ತು ವಾಹನ ಯಾರ ವಶದಲ್ಲಿತ್ತೋ ಆತನು ವಿವರಗಳು ವಾಹನದಲ್ಲಿ ಮದ್ಯ ಅಥವಾ ಅಮಲಿನ ಪದಾರ್ಥ ಸಾಗಾಣಿಕೆಯಾಗಿರುವುದರ ಬಗ್ಗೆ ತಮ್ಮಗಳ ಗಮನಕ್ಕೆ ಬಾರದೇ ಅಥವಾ ಶಾಮೀಲಾಗದೇ ಈ ಕೃತ್ಯವು ಸಂಭವಿಸಿದೆ. ಮತ್ತು ಇಂತಹ ಉಪಯೋಗದ ವಿರುದ್ಧ ತಾವು ಪ್ರತಿಯೊಬ್ಬರು ಎಲ್ಲಾ ರೀತಿಯ ಸಕಾರಣವಾದ ಮತ್ತು ಅಗತ್ಯವಾದ ಮಂಜೂರಾತಿಯನ್ನು ತೆಗೆದುಕೊಂಡಿರುವುದರ ಬಗ್ಗೆ ಅಧಿಕೃತ ಅಧಿಕಾರಿಗಳಿಗೆ ತೃಪ್ತಿಕರವಾಗಿ ಸಾಭೀತುಪಡಿಸಬೇಕಾಗಿರುತ್ತದೆ ಆದರೆ ವಾಹನ ಮಾಲೀಕರು ತಮ್ಮ ಹೇಳಿಕೆಯಿಂದಾಗಲೀ ಅಥವಾ ಸಾಕ್ಷ್ಯಾಧಾರಗಳಿಂದಾಗಲೀ ತಮ್ಮ ಹೊಣೆಗಾರಿಕೆಯನ್ನು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ಸಾಬೀತು ಪಡಿಸಿರುವುದಿಲ್ಲಾ.

ಮೂರನೇ ವಿವಾದಾಂಶಕ್ಕೆ ಉತ್ತರ-**ಹೌದು:**

ಮೊದಲನೆಯ ಮತ್ತು ಎರಡನೆಯ ವಿವಾದಂಶದಿಂದ ಪಡೆದ ಉತ್ತರದಿಂದ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಂಡು ಬಂದಿರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

**ಸಂ.ಇಎಕ್ಸಇ:ಬಿಜೆಪಿ:ಇಐ.ಬಿ.ಡಿಟಿಸಿಆರ್:26/2006-07, ದಿನಾಂಕ:23ನೇ ಫೆಬ್ರವರಿ 2007**

ಕೆ.ಆರ್. ಗೌಡ್ರ, ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ 43 (ಸಿ) ಅನ್ವಯ ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ. ಬಾಗೇವಾಡಿ ಇವರ ಮೊಕದ್ದಮೆ ಸಂಖ್ಯೆ:07/2006-07 ದಿನಾಂಕ:23.8.2006ರಲ್ಲಿ ವಶಪಡಿಸಿಕೊಂಡಿರುವ ಸುಜಕಿ ಮ್ಯಾಕ್ಸ 100 ಆರ್ ದ್ವಿಚಕ್ರ ವಾಹನ ನಂ.ಕೆಎ-28-ಹೆಚ್-1723 ನ್ನು ಮತ್ತು 40.000ಲೀಟರ ಕಳ್ಳಭಟ್ಟಿ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದ್ದೇನೆ.

ಮೇಲೆ ತಿಳಿಸಿದ 40.000 ಲೀಟರ ಕಳ್ಳಭಟ್ಟಿ ಸಾರಾಯಿಯನ್ನು ಅಬಕಾರಿ ಉಪ ಅಧೀಕ್ಷಕರು ಬಿಜಾಪೂರ ಉಪ ವಿಭಾಗ ಇವರ ಸಮಕ್ಷಮ (ಶ್ಯಾಂಪಲ್ ಬಾಟಲಿಗಳನ್ನು ಹೊರತುಪಡಿಸಿ) ನಾಶಪಡಿಸಲು ಆದೇಶಿಸಿದೆ.

ಈ ಆದೇಶವನ್ನು ಇಂದು ದಿನಾಂಕ:23.2.2007 ರಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚಿಸಿ ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಿದೆ.

**ಕೆ.ಆರ್. ಗೌಡ್ರ**
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ
ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ

**ಅನುಬಂಧ(1)**

**ಫಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ–1 ಆರ್.ಜಿ. ಹಿರೇಮಠ ತನಿಖಾಧಿಕಾರಿ
ಅಬಕಾರಿ ಉಪ ನಿರೀಕ್ಷಕರು ಮುದ್ದೇಬಿಹಾಳ ಕಛೇರಿ
ಜಾರಿ ಮತ್ತು ತನಿಖೆ

ಪ್ರಾ.ಸಾ–2 ಇಮಾಮಸಾಬ ತಂದೆ ಹುಸೇನಸಾಬ ಗಣಿ ಪಂಚರು
ವಯಸ್ಸು–55 ಜಾ–ಮುಸ್ಲಿಂ ಉ–ಕೂಲಿ,
ಸಾ: ಬ. ಬಾಗೇವಾಡಿ

**ಅನುಬಂಧ–(2)**

**ಫಿರ್ಯಾಧಿದಾರರ ಪರಮಂಡಿಸಲಾದ ದಾಖಲೆಗಳು**

| | |
|---|---|
| ನಿಶಾನೆ–ಪಿ–1 | ಪ್ರಥಮ ವರ್ತಮಾನ ವರದಿ |
| ನಿಶಾನೆ–ಪಿ1(ಎ) | ಪ್ರಾ.ಸಾ.–1 ರವರ ಸಹಿ |
| ನಿಶಾನೆ–ಪಿ–2 | ಪಂಚನಾಮೆ ಧೃಢಿಕೃತ ಪತ್ರ |
| ನಿಶಾನೆ–ಪಿ–2(ಎ) | ಪ್ರಾ.ಸಾ.–1 ರವರ ಸಹಿ |
| ನಿಶಾನೆ–ಪಿ–3 | ಸರ್ಕಾರಿ ತರ್ಫೆ ಪಿರ್ಯಾಧಿ |
| ನಿಶಾನೆ–ಪಿ–3(ಎ) | ಪ್ರಾ.ಸಾ–1 ರವರ ಸಹಿ |
| ನಿಶಾನೆ–ಪಿ–4 | ರಸಾಯನಿಕ ತಜ್ಞರ ವರದಿ |
| ನಿಶಾನೆ–ಪಿ–1(ಬಿ) | ಪ್ರಾ.ಸಾ.–2 ರವರ ಸಹಿ |

**ಅನುಬಂಧ–(3)**

**ಫಿರ್ಯಾಧಿದಾರರ ಪರ ಗುರುತಿಸಲಾದ ವಸ್ತುಗಳು**

1) ಎಂ.ಓ–1 ಸುಜುಕಿ ಮ್ಯಾಕ್ಸ 100 ಆರ್ ದ್ವಿಚಕ್ರ ವಾಹನ ನಂ.ಕೆಎ–28–ಹೆಚ್–1723
2) ಎಂ.ಓ–2 ಮಾದರಿ ಕಳ್ಳಭಟ್ಟಿ ಸಾರಾಯಿ ಬಾಟಲಿಗಳು

**ಅನುಬಂಧ–(4)**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು**

ಇಲ್ಲಾ

**ಅನುಬಂಧ–(5)**

**ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು**

ಇಲ್ಲಾ

**ಕೆ.ಆರ್. ಗೌಡ್ರ**
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ
ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ

ಪಿ.ಆರ್. 322

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ ರವರ ಕಛೇರಿ ನಡವಳಿಗಳು**
**ಗುನ್ನೆ ನಂ:08/2006–07. ದಿ:5.09.2006**
**ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ. ಬಾಗೇವಾಡಿ.**

**ನಂ:ಇಎಕ್ಸ್ಇ:ಬಿಜೆಪಿ:ಇಐಬಿ:ಡಿಟಿಸಿಆರ್:31/2006–07, ದಿ:23.2.2007**

**ಉಪಸ್ಥಿತರು: ಕೆ.ಆರ್. ಗೌಡ್ರ**
**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ.**
**ಬಿಜಾಪೂರ ಜಿಲ್ಲೆ, ಬಿಜಾಪೂರ**

| **ಪಿರ್ಯಾಧಿದಾರರು** | | **ಆರೋಪಿತರು** |
|---|---|---|
| ಅಬಕಾರಿ ಉಪ ನಿರೀಕ್ಷಕರು<br>ಜಾರಿ ಮತ್ತು ತನಿಖೆ ಬ. ಬಾಗೇವಾಡಿ | **ವಿರುದ್ಧ** | ಇಲ್ಲಾ |

**ವಾಹನದ ಮಾಲೀಕರು**

ಶ್ರೀ ದಶರಥ. ತಾಯಿ ಸಾಭವ್ವಾ, ಹರಿಜನ ಸಾ:
ಕೋಲ್ಹಾರ, ತಾ:ಬ. ಬಾಗೇವಾಡಿ (ವಾಹನ ಮಾಲೀಕರು)

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 5.9.2006 ರಂದು ಬ.ಬಾಗೇವಾಡಿ ತಾಲ್ಲೂಕು ಜಾರಿ ಮತ್ತು ತನಿಖೆ ಕಛೇರಿಯ ಅಬಕಾರಿ ಉಪ ನಿರೀಕ್ಷಕರು, ಅಬಕಾರಿ ಸಿಬ್ಬಂದಿಯವರು ಮತ್ತು ಪಂಚ ಜನರು ಕೋಲ್ಹಾರ–ಯು.ಕೆ.ಪಿ. ಸರ್ಕಲ್ ಮಾರ್ಗದ ರಸ್ತೆಯ ಬದಿಯಲ್ಲಿ ರಸ್ತೆ ಕಾವಲು ಮಾಡುತ್ತಾ ನಿಂತಾಗ ಒಂದು ದ್ವಿಚಕ್ರ ವಾಹನ ಬರುವುದನ್ನು ಕಂಡರು. ರಸ್ತೆ ಮೇಲೆ ವಾಹನ ಸವಾರದಾರನು ಸಮವಸ್ತ್ರದಲ್ಲಿದ್ದ ಸಿಬ್ಬಂದಿ ಜನರನ್ನು ಕಂಡು ರಸ್ತೆ ಪಕ್ಕದಲ್ಲಿ ವಾಹನವನ್ನು ಬಿಟ್ಟು ಓಡಿ ಹೋಗಿರುತ್ತಾನೆ. ಸದರಿ ಸ್ಥಳದ ಹತ್ತಿರ ಬಂದಾಗ ಅದನ್ನು ನೋಡಲಾಗಿ ಅದು ಒಂದು ಟಿವ್ಹಿಎಸ್ XL ಸೂಪರ್ ದ್ವಿಚಕ್ರ ವಾಹನ ಅದರ ನಂ :ಕೆಎ–28–ಜೆ–422 ಇರುವುದು ತಿಳಿದುಕೊಂಡು ಸದರಿ ದ್ವಿಚಕ್ರ ವಾಹನಕ್ಕೆ ಕಟ್ಟಿದ ಮೋಟಾರು ಟ್ಯೂಬನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಅಂದಾಜು 20 ಲೀಟರ ಘಾಟ ವಾಸನೆಯು ದ್ರವ ಪದಾರ್ಥ ಇದ್ದು, ಇದು ಕಳ್ಳಭಟ್ಟಿ ಸಾರಾಯಿ ಇರುವುದು ಗೊತ್ತಾಗಿರುತ್ತದೆ. ತದನಂತರ ಸದರಿ ಟಿವ್ಹಿಎಸ್ XL ಸೂಪರ್ ದ್ವಿಚಕ್ರ ವಾಹನವನ್ನು ಪರಿಶೀಲಿಸಲಾಗಿ ಅದರ ನಂ:ಕೆಎ–28ಜೆ–422, ಚೆಸ್ಸಿ ನಂಬರ: P 1803 F 12687 ಮತ್ತು ಇಂಜಿನ ನಂ: P1803 M012705 ಇರುತ್ತದೆ. ನಂತರ ಮೋಟಾರ್ ಟ್ಯೂಬಿನಲ್ಲಿದ್ದ 20 ಲೀಟರ್ ಕಳ್ಳಭಟ್ಟಿ ಸಾರಾಯಿಂದ 180 ಮಿಲಿಯ ಬಾಟಲಿಯಲ್ಲಿ ರಸಾಯನ ಪರೀಕ್ಷೆಗಾಗಿ ಕಳ್ಳಭಟ್ಟಿ ಸಾರಾಯಿಯನ್ನು ತೆಗೆದುಕೊಂಡು ಶೀಲ್ ಮಾಡಿ ಪಂಚರ ಹಾಗೂ ಅಬಕಾರಿ ಉಪ ನಿರೀಕ್ಷಕರು ಇವರ ಸಹಿ ಚೀಟಿಗಳನ್ನು ಅಂಟಿಸಿ ಮುದ್ದೇಮಾಲನ್ನು ಹಾಗೂ ದ್ವಿಚಕ್ರ ವಾಹನವನ್ನು ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು ತಮ್ಮ ತಬಾಕ್ಕೆ ತೆಗೆದುಕೊಂಡು ಘಟನೆ ನಡೆದ ಸ್ಥಳದಲ್ಲಿ ಪಂಚರ ಸಮಕ್ಷಮ ಪಂಚನಾಮೆ ಕ್ರಮ ಜರುಗಿಸಿರುತ್ತಾರೆ. ನಂತರ ಗುನ್ನೆ ನಂ. 08/2006–07 ನ್ನು ದಾಖಲಿಸಿ ಪ್ರಥಮ ವರ್ತಮಾನ ವರದಿಯನ್ನು ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ ಬ. ಬಾಗೇವಾಡಿಯಲ್ಲಿ ಸರ್ಕಾರಿ ತರ್ಫೆ ಪಿರ್ಯಾಧಿಯನ್ನು ಸಲ್ಲಿಸಿರುತ್ತಾರೆ. ಮುಂದಿನ ಕ್ರಮಕ್ಕಾಗಿ ಪ್ರಥಮ ವರ್ತಮಾನ ವರದಿ ಮತ್ತು ಮಾಲು ಜಪ್ತು ಪಂಚನಾಮೆಯೊಂದಿಗೆ ಈ ಕಚೇರಿಗೆ ವರದಿ ಸಲ್ಲಿಸಿರುತ್ತಾರೆ.

ನಂತರ ಪಿರ್ಯಾಧಿದಾರರು ರಸಾಯನಿಕ ಮಾದರಿಯನ್ನು ರಸಾಯನಿಕ ತಜ್ಞರಿಗೆ ಕಳುಹಿಸಿ ವರದಿ ಪಡೆದಿರುತ್ತಾರೆ. ಸದರಿ ರಸಾಯನಿಕ ತಜ್ಞರ ವರದಿಯಲ್ಲಿ ಜಪ್ತಾದ ಕಳ್ಳಭಟ್ಟಿ ಸಾರಾಯಿಯಲ್ಲಿ 71.02 ಯು.ಪಿ. ಮದ್ಯಸಾರದ ಅಂಶವಿದ್ದು, ಇದು ಮಾನವ ಸೇವನೆಗೆ ಯೋಗ್ಯವಿರುವುದಿಲ್ಲವೆಂದು ದೃಢಪಡಿಸಿರುತ್ತಾರೆ, ನಂತರ ಈ ಪ್ರಾಧಿಕಾರದಿಂದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬಿಜಾಪೂರ ಇವರಿಗೆ ಜಪ್ತು ಮಾಡಿದ ವಾಹನದ ಬಿ–ಎಕ್ಸಟ್ರ್ಯಾಕ್ಟ ಕಳುಹಿಸಲು ಕೋರಿ ಪತ್ರ ಬರೆಯಲಾಗಿದೆ. ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಸದರಿ ವಾಹನದ ಬಿ–ಎಕ್ಸಟ್ರ್ಯಾಕ್ಟನಲ್ಲಿ ದ್ವಿಚಕ್ರ ವಾಹನ ಸಂಖ್ಯೆ ಕೆಎ–28–ಜೆ–422 ಮತ್ತು ವಾಹನ ಮಾಲೀಕರ ಹೆಸರು ಶ್ರೀ ದಶರಥ ತಾಯಿ ಸಾಭವ್ವಾ ಹರಿಜನ. ಸಾ:ಕೋಲ್ಹಾರ, ತಾ: ಬ. ಬಾಗೇವಾಡಿ ಅಂತಾ ತಿಳಿಸಿರುತ್ತಾರೆ.

ದಿನಾಂಕ: 27.12.2006 ರಂದು ಈ ಪ್ರಾಧಿಕಾರದಿಂದ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ಪ್ರಕಾರ ಕಾರಣ ಕೇಳುವ ನೋಟಿಸನ್ನು ಸದರಿ ವಾಹನ ಮಾಲೀಕರಾದ ಶ್ರೀ ದಶರಥ. ತಾಯಿ ಸಾಭವ್ವಾ ಹರಿಜನ ಸಾ: ಕೋಲ್ಹಾರ, ತಾ: ಬ. ಬಾಗೇವಾಡಿ ಇವರಿಗೆ ನೋಟಿಸು ಹೊರಡಿಸಲಾಯಿತು., ಸದರಿ ನೋಟಿಸನ್ನು ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ. ಬಾಗೇವಾಡಿ ಇವರು ಸದರಿ ವಾಹನ ಮಾಲೀಕರಿಗೆ ಜಾರಿ ಮಾಡಿ ಈ ಕಚೇರಿಗೆ ಸ್ವೀಕೃತಿ ಪತ್ರ ಸಲ್ಲಿಸಿರುತ್ತಾರೆ. ದಿನಾಂಕ:31.1.2007 ರಂದು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ಕಲಂ 43 (ಎ) ಪ್ರಕಾರ ಈ ಪ್ರಾಧಿಕಾರವು ದಿನಾಂಕ:22.2.2007 ರಂದು ವಿಚಾರಣೆ ನಡೆಸಲಾಗುವುದೆಂದು ಎಲ್ಲ ಸಾಕ್ಷಿದಾರರಿಗೆ ನೋಟಿಸು ತೆಗೆಯಲಾಯಿತು.

ದಿನಾಂಕ: 22.2.2007 ರಂದು ವಿಚಾರಣೆಯನ್ನು ನಡೆಸಲಾಯಿತು ಅಭಿಯೋಗದ ಪರವಾಗಿ ಸಾಕ್ಷಿದಾರರಾದ ಪ್ರಾ.ಸಾ–1, ಪ್ರಾ.ಸಾ–2 ವಿಚಾರಣೆ ಮಾಡಿ ನಾಲ್ಕು (04) ದಾಖಲಾತಿಗಳನ್ನು ಮತ್ತು ಎರಡು ಮುದ್ದೇಮಾಲುಗಳನ್ನು ಗುರುತಿಸಿದ್ದು ಇರುತ್ತದೆ.

ಪ್ರಾ.ಸಾ–1 ಇವರು ಸಾಕ್ಷಿ ನುಡಿಯುತ್ತಾ ದಿನಾಂಕ: 5.9.2006 ರಂದು ಸಾಯಂಕಾಲ 6.00 ಗಂಟೆಗೆ ಪಂಚ ಜನರನ್ನು ತಮ್ಮ ಕಛೇರಿಗೆ ಕರೆಯಿಸಿಕೊಂಡು ವಿಷಯವನ್ನು ತಿಳಿಸಿ ಪಂಚರೊಂದಿಗೆ ಕೋಲ್ಹಾರ–ಯು.ಕೆ.ಪಿ ಸರ್ಕಲ್ ರಸ್ತೆಯಲ್ಲಿ ರಸ್ತೆ ಕಾವಲು ಮಾಡುತ್ತಾ ನಿಂತುಕೊಂಡರು, ಆ ಸಮಯದಲ್ಲಿ ಒಂದು ದ್ವಿಚಕ್ರ ವಾಹನ ಬರುವುದನ್ನು ಅಬಕಾರಿ ಅಧಿಕಾರಿಗಳು ಹಾಗೂ ಪಂಚ ಜನರು ನೋಡುತ್ತಿರುವಾಗ ದ್ವಿಚಕ್ರ ವಾಹನದ ಚಾಲಕನು ಸಮವಸ್ತ್ರದಲ್ಲಿರುವ ಸಿಬ್ಬಂದಿ ಜನರನ್ನು ಕಂಡು ವಾಹನವನ್ನು ಅಲ್ಲಿಯೇ ಬಿಟ್ಟು ಓಡಿ ಹೋಗಿರುತ್ತಾನೆಂದು ಪಿರ್ಯಾಧಿದಾರರು ಸಾಕ್ಷಿ ನುಡಿದಿರುತ್ತಾರೆ. ಅವನನ್ನು ಸಿಬ್ಬಂದಿ ಜನರು ಹಿಡಿಯಲು ಪ್ರಯತ್ನಿಸಿದರು ಆರೋಪಿತನು ಪರಾರಿ ಆಗಿರುತ್ತಾನೆ. ನಂತರ ಪಂಚರೊಂದಿಗೆ ದ್ವಿಚಕ್ರ ವಾಹನ ಬಿದ್ದ ಸ್ಥಳಕ್ಕೆ ಬಂದು ನೋಡಲಾಗಿ ವಾಹನದ ನೋಂದಣಿ ಸಂಖ್ಯೆ ಕೆಎ–28–ಜೆ–422 ಇದ್ದು ವಾಹನಕ್ಕೆ ಕಟ್ಟಿದ ಕರಿ ಬಣ್ಣದ ಟ್ಯೂಬನ್ನು ಸಿಬ್ಬಂದಿ ಮತ್ತು ಪಂಚ ಜನರ ಸಮಕ್ಷಮ ಬಿಚ್ಚಿ ನೋಡಲಾಗಿ ಅದರಲ್ಲಿ ಅಂದಾಜು 20 ಲೀಟರ್ ಕಳ್ಳಭಟ್ಟಿ ಸಾರಾಯಿ ಇದ್ದು ಅದರಿಂದ ಕಗ್ಗ ವ ಹುಳುಚು ವಾಸನೆ ಬರುತ್ತಿತ್ತು. ನಂತರ ಸದರಿ ಟ್ಯೂಬನಿಂದ ಒಂದು 180 ಮಿಲಿಯ ಬಾಟಲಿಯಲ್ಲಿ ರಸಾಯನಿಕ ಪರೀಕ್ಷೆಗೆ ತೆಗೆದು ಅವುಗಳನ್ನು ಶೀಲು ಮಾಡಿ ತಮ್ಮ ವ ಪಂಚರ ಸಹಿ ಮಾಡಿದ ಚೀಟಿಯನ್ನು ಅಂಟಿಸಿ ಸರ್ಕಾರಿ ಶೀಲಿನಿಂದ ಶೀಲ್ ಮಾಡಿದರು. ನಂತರ ಘಟನೆ ನಡೆದ ಸ್ಥಳದಲ್ಲಿ ರಾತ್ರಿ 10.00 ಗಂಟೆಯಿಂದ 10.30 ರವರೆಗೆ ಪಂಚರ

ಸಮಕ್ಷಮ ಮಾಲು ಜಪ್ತು ಪಂಚನಾಮೆ ಬರೆಯಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ. ಸದರಿ ಪಂಚನಾಮೆಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ–ಪಿ–1 ಎಂದು ಗುರುತಿಸಿರುತ್ತಾರೆ, ಅದರ ಮೇಲಿನ ತಮ್ಮ ಸಹಿಯನ್ನು ನಿಶಾನೆ ಪಿ–1(ಎ) ಎಂದು ಗುರುತಿಸಿರುತ್ತಾರೆ, 20 ಲೀಟರ್ ಕಳ್ಳಭಟ್ಟಿ ಸಾರಾಯಿ ತುಂಬಿದ ಕರಿ ಬಣ್ಣದ ಟ್ಯೂಬನ್ನು ಮತ್ತು ದ್ವಿಚಕ್ರವಾಹನವನ್ನು ಪಂಚ ಜನರ ಮತ್ತು ತಮ್ಮ ಸಹಿನಿಸಿದ ಚೀಟಿಗಳನ್ನು ಅಂಟಿಸಿ ತಮ್ಮ ತಾಬಾಕ್ಕೆ ತೆಗೆದುಕೊಂಡು. ಸದರಿ ಜಪ್ತಾದ ಮುದ್ದೇಮಾಲನ್ನು ಈಗ ನೋಡುತ್ತಿದ್ದು, ಅವುಗಳನ್ನು ಎಂಓ–01 ಮತ್ತು ದ್ವಿಚಕ್ರ ವಾಹನವನ್ನು ಎಂಓ–2 ಎಂದು ಗುರುತಿಸಿರುತ್ತಾರೆ. ಮಾಲು ಜಪ್ತು ಪಂಚನಾಮೆ ಮಾಡಿ ಗುನ್ನೆ ನಂ:08/2006–07ರ ಅಡಿಯಲ್ಲಿ ಪ್ರಥಮ ವರ್ತಮಾನ ವರದಿಯನ್ನು ತಯಾರಿಸಿರುತ್ತಾರೆ. ಸದರಿ ಪ್ರಥಮ ವರ್ತಮಾನ ವರದಿಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ–ಪಿ–2 ಅದರಲ್ಲಿ ಇರುವ ತಮ್ಮ ಸಹಿಯನ್ನು ನಿಶಾನೆ–ಪಿ2(ಎ) ಎಂದು ಗುರುತಿಸಿರುತ್ತಾರೆ. ನಂತರ ಜೆ.ಎಂ.ಎಫ್.ಸಿ. ನ್ಯಾಯಾಲಯ ಬ. ಬಾಗೇವಾಡಿಯಲ್ಲಿ ಪಂಚನಾಮೆಯೊಂದಿಗೆ ಪ್ರಥಮ ವರ್ತಮಾನ ವರದಿ ಸಂಖ್ಯೆ 08/2006–07 ಗುನ್ನೆ ದಾಖಲು ಮಾಡಿದ ಬಗ್ಗೆ ಪಿರ್ಯಾಧಿಯನ್ನು ಸಲ್ಲಿಸಿರುತ್ತಾರೆ ಸದರಿ ಪಿರ್ಯಾಧಿಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ–ಪಿ–3 ಮತ್ತು ಅದರ ಮೇಲಿನ ತಮ್ಮ ಸಹಿಯನ್ನು ನಿಶಾನೆ–ಪಿ–3(ಎ) ಎಂದು ಗುರುತಿಸಿರುತ್ತಾರೆ.

ಸದರಿ ಪ್ರಕರಣ ಮುಂದಿನ ತನಿಖೆಯ ಕುರಿತು ದಿನಾಂಕ:10.9.2006 ರಂದು ತಮ್ಮ ಕಛೇರಿಯ ಮುಖ ಪತ್ರದೊಂದಿಗೆ ಸದರಿ ಗುನ್ನೆಯಲ್ಲಿ 180 ಮಿಲಿಯ ಕಳ್ಳಭಟ್ಟಿ ಸಾರಾಯಿ ಬಾಟಲಿಯನ್ನು ತಮ್ಮ ಕಛೇರಿಯ ಅಬಕಾರಿ ರಕ್ಷಕರಾದ ಶ್ರೀ ಬಿ.ಪಿ. ತಳಕೇರಿ ಇವರ ಜೊತೆಗೆ ಮುಖ್ಯ ರಸಾಯನಿಕ ತಜ್ಞರ (ಅಬಕಾರಿ) ಬೆಂಗಳೂರು ಇವರಿಗೆ ರಸಾಯನಿಕ ಪರೀಕ್ಷೆಗಾಗಿ ಕಳುಹಿಸಿಕೊಟ್ಟು ರಸಾಯನಿಕ ತಜ್ಞರಿಂದ ಪ್ರಮಾಣ ಪತ್ರ ಪಡೆದುಕೊಂಡಿರುತ್ತಾರೆ. ಸದರಿ ರಸಾಯನಿಕ ಪ್ರಮಾಣ ಪತ್ರದಲ್ಲಿ ಜಪ್ತಾದ ಕಳ್ಳಭಟ್ಟಿ ಸಾರಾಯಿಯಲ್ಲಿ 71.2 ಯು.ಪಿ. ಮದ್ಯಸಾರದ ಅಂಶವಿದ್ದು, ಇದು ಮಾನವನ ಸೇವನೆಗೆ ಯೋಗ್ಯ ಇರುವುದಿಲ್ಲಾ ಎಂದು ತಿಳಿಸಿರುತ್ತಾರೆ ಸದರಿ ರಸಾಯನಿಕ ಪ್ರಮಾಣ ಪತ್ರ ಈಗ ನೋಡುತ್ತಿದ್ದು ಅದನ್ನು ನಿಶಾನೆ–ಪಿ–4 ಎಂದು ಗುರುತಿಸಿರುತ್ತಾರೆ. ಸಾಕ್ಷಿದಾರರ ಸಾಕ್ಷಿ ಹೇಳುವ ಸಮಯದಲ್ಲಿ ವಾಹನ ಮಾಲೀಕರು ಹಾಜರು ಇಲ್ಲದಿರುವುದರಿಂದ ಯಾವುದೇ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು. ವಾಹನ ಮಾಲೀಕರ ಗೈರು ಹಾಜರಾತಿ ಮತ್ತು ಸಾಕ್ಷಿದಾರರ ಹೇಳಿಕೆಯನ್ನು ಅವಲೋಕಿಸಿದಾಗ ಸದರಿ ವಾಹನ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಲ್ಲಿ ತೊಡಗಿರುವುದಕ್ಕೆ ಪುಷ್ಠಿ ನೀಡುತ್ತದೆ.

ಪ್ರಾ.ಸಾ–2 ಇವರು ಪಂಚ ಸಾಕ್ಷಿಯಾಗಿದ್ದು, ಸಾಕ್ಷಿ ನುಡಿಯುತ್ತಾ ದಿನಾಂಕ:5.9.2006 ರ ಸಮಯ ಸಾಯಂಕಾಲ 6.00 ಗಂಟೆಗೆ ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ. ಬಾಗೇವಾಡಿ ತಾಲ್ಲೂಕು ಇವರು ತಮ್ಮನ್ನು ಕಛೇರಿಗೆ ಕರೆಯಿಸಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಹಾಗೂ ಮಾರಾಟವನ್ನು ತಡೆಯುವ ಉದ್ದೇಶದಿಂದ ಅಬಕಾರಿ ಅಧಿಕಾರಿಗಳು ಹಾಗೂ ಸಿಬ್ಬಂದಿ ಜನರು ರಸ್ತೆಗಾವಲು ಮಾಡಲು ಹೊರಟಿದ್ದು ಒಂದು ವೇಳೆ ಅಪರಾಧ ಪತ್ತೆಯಾದಲ್ಲಿ ತಾವುಗಳು ಪಂಚರಾಗಿ ಪಂಚನಾಮೆಯನ್ನು ನಡೆಸಿಕೊಡಬೇಕು ಎಂದು ಕೇಳಿಕೊಂಡರು, ಆಗ ಅದಕ್ಕೆ ಒಪ್ಪಿಕೊಂಡು ಅಬಕಾರಿ ಅಧಿಕಾರಿಗಳ ಜೊತೆ ಹೊರಟು ಬ. ಬಾಗೇವಾಡಿಯಿಂದ ರಸ್ತೆ ಕಾವಲು ಮಾಡುತ್ತಾ ಕೋಲ್ಹಾರ–ಯು.ಕೆ.ಪಿ. ಸರ್ಕಲ್ ರಸ್ತೆಯಲ್ಲಿ ಬಂದು ನಿಂತಿಕೊಂಡರು, ರಸ್ತೆಗಾವಲು ಮಾಡುತ್ತಿರುವಾಗ ದೂರದಲ್ಲಿ ಒಂದು ದ್ವಿಚಕ್ರ ವಾಹನ ಬರುತ್ತಿರುವುದನ್ನು ಕಂಡು ಸಂಶಯಗೊಂಡ ಅಧಿಕಾರಿಗಳು ಹಾಗೂ ಸಿಬ್ಬಂದಿ ರಸ್ತೆ ಮೇಲೆ ಬಂದಾಗ ಸಮವಸ್ತ್ರದಲ್ಲಿದ್ದ ಅಧಿಕಾರಿಗಳ ಹಾಗೂ ಸಿಬ್ಬಂದಿಯನ್ನು ವಾಹನದ ಹೆಡ್ ಲೈಟ್ ಬೆಳಕಿನಲ್ಲಿ ಕಂಡು ವಾಹನ ಬಿಟ್ಟು ಓಡಿ ಹೋದನು. ಆಗ ಸಿಬ್ಬಂದಿ ಅವನನ್ನು ಬೆನ್ನಟ್ಟಿ ಹಿಡಿಯಲು ಪ್ರಯತ್ನಿಸಿದರು. ಆದರೆ ಆ ವ್ಯಕ್ತಿಯು ಕತ್ತಲಲ್ಲಿ ಪರಾರಿಯಾದನು. ಅಂತಾ ಸಾಕ್ಷಿ ನುಡಿದಿರುತ್ತಾರೆ. ನಂತರ ಅಧಿಕಾರಿಗಳೊಂದಿಗೆ ವಾಹನ ಬಿದ್ದ ಸ್ಥಳಕ್ಕೆ ಬಂದು ನೋಡಲಾಗಿ ಅಲ್ಲಿ ಒಂದು ದ್ವಿಚಕ್ರ ವಾಹನವಿದ್ದು ಅದರ ನೋಂದಣಿ ಸಂಖ್ಯೆ:ಕೆಎ–28–ಜೆ–422 ಇದ್ದು, ವಾಹನಕ್ಕೆ ಕಟ್ಟಿದ ಕರಿ ಬಣ್ಣದ ಮೋಟಾರ್ ಟ್ಯೂಬನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಕಳ್ಳಭಟ್ಟಿ ಸಾರಾಯಿ ಇದ್ದು ಅದರಿಂದ ಕಗ್ಗ ವ ಹುಳುಚು ವಾಸನೆ ಬರುತ್ತಿತ್ತು. ಅಂದಾಜು 20 ಲೀಟರ ಕಳ್ಳಭಟ್ಟಿ ಸಾರಾಯಿ ತುಂಬಿತ್ತು. ಅಂತಾ ಆಗ ಅಧಿಕಾರಿಗಳು ಸದರಿ ಟ್ಯೂಬನಿಂದ 180 ಎಂ.ಎಲ್ ದಷ್ಟು ಕಳ್ಳಭಟ್ಟಿ ಸಾರಾಯಿಯನ್ನು ರಸಾಯನಿಕ ಪರೀಕ್ಷೆಗಾಗಿ ತೆಗೆದು ಅದನ್ನು ಶೀಲು ಮಾಡಿ ಅದಕ್ಕೆ ತಮ್ಮ ವ ಅಧಿಕಾರಿಗಳ ಸಹಿನಿಸಿದ ಚೀಟಿಗಳನ್ನು ಅಂಟಿಸಿ ಸರ್ಕಾರಿ ಶೀಲಿನಿಂದ ಶೀಲು ಮಾಡಿದರು. ನಂತರ ಟ್ಯೂಬನ್ನು ಕಟ್ಟಿ ಅದಕ್ಕೆ ತಮ್ಮ ವ ಅಧಿಕಾರಿಗಳ ಸಹಿನಿಸಿದ ಚೀಟಿಗಳನ್ನು ಅಂಟಿಸಿದರು. ದ್ವಿಚಕ್ರ ವಾಹನ ಮತ್ತು ಮುದ್ದೇಮಾಲನ್ನು ಅಧಿಕಾರಿಗಳು ತಮ್ಮ ತಾಬಾಕ್ಕೆ ತೆಗೆದುಕೊಂಡರು. ಎಂದು ಈ ಪಂಚ ಸಾಕ್ಷಿದಾರರು ಸಾಕ್ಷಿ ನುಡಿದಿರುತ್ತಾರೆ. ಸದರಿ ಜಪ್ತಾದ ಮುದ್ದೇಮಾಲನ್ನು ಈಗ ನೋಡುತ್ತಿದ್ದು, ಅವುಗಳನ್ನು ಎಂಓ–01 ಮತ್ತು ದ್ವಿಚಕ್ರ ವಾಹನವನ್ನು ಎಂಓ–2 ಎಂದು ಗುರುತಿಸಿರುತ್ತಾರೆ. ಗುನ್ನೆ ಘಟಿಸಿದ ಸ್ಥಳದಲ್ಲಿಯೇ ಮಾಲು ಜಪ್ತು ಪಂಚನಾಮೆಯನ್ನು ಸಮಯ ರಾತ್ರಿ 10.00 ರಿಂದ 10.30ರ ವರೆಗೆ ಟಾರ್ಚ ಬೆಳಕಿನಲ್ಲಿ ಬರೆಯಲಾಯಿತು. ಸದರಿ ಪಂಚನಾಮೆಯನ್ನು ಈಗ ನೋಡುತ್ತಿದ್ದು ಅದರಲ್ಲಿ ಇರುವ ತಮ್ಮ ಸಹಿಯನ್ನು ನಿಶಾನೆ–ಪಿ–1(ಬಿ) ಎಂದು ಗುರುತಿಸಿರುತ್ತಾರೆ. ಸದರಿ ಸಾಕ್ಷಿದಾರರ ಹೇಳಿಕೆಯ ಸಮಯದಲ್ಲಿ ವಾಹನ ಮಾಲೀಕರು ಹಾಜರು ಇಲ್ಲದಿರುವುದರಿಂದ ಯಾವುದೇ ಪಾಟಿ ಸವಾಲು ಇಲ್ಲವೆಂದು ಪರಿಗಣಿಸಲಾಯಿತು. ಈ ಪಂಚ ಸಾಕ್ಷಿದಾರನು ಅಭಿಯೋಗದ ಪರವಾಗಿ ಸಾಕ್ಷಿ ನುಡಿದಿದ್ದರಿಂದ ವಾಹನವು ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಮಾಡುವುದರಲ್ಲಿ ತೊಡಗಿರುವುದಕ್ಕೆ ಪುಷ್ಠಿ ನೀಡುತ್ತದೆ.

**ಮೊದಲನೇ ವಿವಾದಾಂಶ:**

ದಿನಾಂಕ:5.9.2006 ರಂದು ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿದೆಯೇ? ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32,34 ರೀತ್ಯಾ ಅಪರಾಧವಾಗಿದೆಯೇ ? ಅಥವಾ ಇಲ್ಲಾ?

**ಎರಡನೇ ವಿವಾದಾಂಶ:**

ಸದರಿ ವಾಹನದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವ ಬಗ್ಗೆ ತನ್ನ ತಿಳುವಳಿಕೆಗೆ ಬಾರದೇ ಅಥವಾ ತಾನು ಶಾಮೀಲಾಗದೇ ನಡೆದಿದೆ ಎಂಬುದರ ಬಗ್ಗೆ ಅರ್ಜಿದಾರನಾಗಲಿ ಅಥವಾ ವಾಹನ ಚಾಲಕರಾಗಲೀ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲಾ?

**ಮೂರನೇಯ ವಿವಾದಾಂಶ:**

ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಿಕ್ಕೆ ಯೋಗ್ಯವಾಗಿದೆಯೇ? ಅಥವಾ ಇಲ್ಲಾ?

**ಮೊದಲನೆಯ ವಿವಾದಾಂಶಕ್ಕೆ ಉತ್ತರ-ಸಕಾರಾತ್ಮಕ (ಹೌದು):**

ಪ್ರಾಶ್ಯೂಕೆಶನ್ ಸಾಕ್ಷಿ ನುಡಿದ ಪಿರ್ಯಾಧಿದಾರರು ನೀಡಿರುವ ಹೇಳಿಕೆಯನ್ನು ಗಮನಿಸಿದಾಗ ಮಹಜರದಲ್ಲಿ ಇರುವ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ಪಂಚರ ಸಾಕ್ಷಿಯು ಕೂಡಾ ಪಿರ್ಯಾಧಿಯ ಸಾಕ್ಷಿಗೆ ಪೂರಕವಾಗಿದೆ. ಪ್ರಕರಣದಲ್ಲಿ ಆರೋಪಿಸಿರುವ ಅಂಶವಾದ ಸದರಿ ವಾಹನದಲ್ಲಿ ಸಾಗಾಣಿಕೆ ಮಾಡಲ್ಪಟ್ಟಿದ್ದು ಕಳ್ಳಭಟ್ಟಿ ಸಾರಾಯಿ ಎಂಬುದು ರಸಾಯನಿಕ ವಿಶ್ಲೇಷಣೆಯ ವರದಿಯಿಂದ ದೃಢಪಟ್ಟಿರುತ್ತದೆ. ಸದರಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಗೆ ಸಂಬಂಧಪಟ್ಟ ದಾಖಲಾತಿಗಳು ವಾಹನದಲ್ಲಿ ಇಲ್ಲದಿರುವ ಅಂಶವನ್ನು ಗಮನಿಸಿದಾಗ ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದೆ.

**ಎರಡನೇಯ ವಿವಾದಾಂಶಕ್ಕೆ ಉತ್ತರ-ಇಲ್ಲಾ:**

ಮೊದಲನೆಯ ವಿವಾದಾಂಶದಿಂದ ಪಡೆದ ಉತ್ತರದಲ್ಲಿ ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದ್ದು, ಈ ಪ್ರಕರಣವು ಸಂಭವಿಸಿದ ಸಮಯದಲ್ಲಿ ಆರೋಪಿ ವಾಹನದ ಚಾಲಕನ ತಿಳುವಳಿಕೆಯಿಂದ ಹಾಗೂ ಈತನ ಶಾಮೀಲಿನಿಂದಲೇ ಸದರಿ ವಾಹನದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ರುಜುವಾತಾಗಿದ್ದು. ವಾಹನದ ಮಾಲೀಕನಿಂದ ಅಥವಾ ಸದರಿ ವಾಹನದ ಚಾಲಕನಿಂದಲೂ ಅವನು ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುತ್ತದೆ ಎಂಬುದು ಸಂದೇಹಾತೀತವಾಗಿ ರುಜುವಾತಾಗಿದೆ. ಇದನ್ನು ಅಲ್ಲಗಳೆಯಲು ವಾಹನ ಮಾಲೀಕನು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲಾ ಮತ್ತು ತನ್ನ ಪರ ಯಾವುದೇ ಸಾಕ್ಷಾಧಾರಗಳನ್ನು ಸಹ ನೀಡಿರುವುದಿಲ್ಲಾ.

ನಿಯಮ 43 (ಬಿ) (2) ರನ್ವಯ ಸ್ವತಃ ವಾಹನದ ಮಾಲೀಕ ಅಥವಾ ಅವರ ಪ್ರತಿನಿಧಿ ಮತ್ತು ವಾಹನ ಯಾರ ವಶದಲ್ಲಿತ್ತೋ ಆತನು ವಿವರಗಳು ವಾಹನದಲ್ಲಿ ಮದ್ಯ ಅಥವಾ ಅಮಲಿನ ಪದಾರ್ಥ ಸಾಗಾಣಿಕೆಯಾಗಿರುವುದರ ಬಗ್ಗೆ ತಮ್ಮಗಳ ಗಮನಕ್ಕೆ ಬಾರದೇ ಅಥವಾ ಶಾಮೀಲಾಗದೇ ಈ ಕೃತ್ಯವು ಸಂಭವಿಸಿದೆ. ಮತ್ತು ಇಂತಹ ಉಪಯೋಗದ ವಿರುದ್ಧ ತಾವು ಪ್ರತಿಯೊಬ್ಬರು ಎಲ್ಲಾ ರೀತಿಯ ಸಕಾರಣವಾದ ಮತ್ತು ಅಗತ್ಯವಾದ ಮಂಜೂರಾತಿಯನ್ನು ತೆಗೆದುಕೊಂಡಿರುವುದರ ಬಗ್ಗೆ ಅಧಿಕೃತ ಅಧಿಕಾರಿಗಳಿಗೆ ತೃಪ್ತಿಕರವಾಗಿ ಸಾಬೀತುಪಡಿಸಬೇಕಾಗಿರುತ್ತದೆ ಆದರೆ ವಾಹನ ಮಾಲೀಕರು ತಮ್ಮ ಹೇಳಿಕೆಯಿಂದಾಗಲೀ ಅಥವಾ ಸಾಕ್ಷಾಧಾರಗಳಿಂದಾಗಲೀ ತಮ್ಮ ಹೊಣೆಗಾರಿಕೆಯನ್ನು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ಸಾಬೀತು ಪಡಿಸಿರುವುದಿಲ್ಲಾ.

**ಮೂರನೇ ವಿವಾದಾಂಶಕ್ಕೆ ಉತ್ತರ-ಹೌದು:**

ಮೊದಲನೆಯ ಮತ್ತು ಎರಡನೆಯ ವಿವಾದಂಶದಿಂದ ಪಡೆದ ಉತ್ತರದಿಂದ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಂಡು ಬಂದಿರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

**ಸಂ.ಇಎಕ್ಸ್ಇ:ಬಿಜೆಪಿ:ಇ.ಐ.ಬಿ.ಡಿಟಿಸಿಆರ್:31/2006-07, ದಿನಾಂಕ:23ನೇ ಫೆಬ್ರವರಿ 2007**

ಕೆ.ಆರ್. ಗೌಡ್ರ, ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ 43 (ಸಿ) ಅನ್ವಯ ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಬ. ಬಾಗೇವಾಡಿ ಇವರ ಮೊಕದ್ದಮೆ ಸಂಖ್ಯೆ:08/2006-07 ದಿನಾಂಕ:5.9.2006ರಲ್ಲಿ ವಶಪಡಿಸಿಕೊಂಡಿರುವ ಟಿವ್ಹಿಎಸ್ ಎಕ್ಸಎಲ್ ದ್ವಿಚಕ್ರ ವಾಹನ ನಂ.ಕೆಎ-28-ಜೆ-422 ನ್ನು ಮತ್ತು 20.000ಲೀಟರ ಕಳ್ಳಭಟ್ಟಿ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದ್ದೇನೆ.

ಮೇಲೆ ತಿಳಿಸಿದ 20.000 ಲೀಟರ ಕಳ್ಳಭಟ್ಟಿ ಸಾರಾಯಿಯನ್ನು ಅಬಕಾರಿ ಉಪ ಅಧೀಕ್ಷಕರು ಬಿಜಾಪೂರ ಉಪ ವಿಭಾಗ ಇವರ ಸಮಕ್ಷಮ (ಶ್ಯಾಂಪಲ ಬಾಟಲಿಗಳನ್ನು ಹೊರತುಪಡಿಸಿ) ನಾಶಪಡಿಸಲು ಆದೇಶಿಸಿದೆ.

ಈ ಆದೇಶವನ್ನು ಇಂದು ದಿನಾಂಕ:23.2.2007 ರಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚಿಸಿ ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಿದೆ.

**ಕೆ.ಆರ್. ಗೌಡ್ರ**

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ

ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ

**ಅನುಬಂಧ(1)**

**ಫಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ–1 ಆರ್.ಜಿ. ಹಿರೇಮಠ ತನಿಖಾಧಿಕಾರಿ
ಅಬಕಾರಿ ಉಪ ನಿರೀಕ್ಷಕರು ಮುದ್ದೇಬಿಹಾಳ ಕಛೇರಿ
ಜಾರಿ ಮತ್ತು ತನಿಖೆ

ಪ್ರಾ.ಸಾ–2 ಇಮಾಮಸಾಬ ತಂದೆ ಹುಸೇನಸಾಬ ಗಣಿ ಪಂಚರು
ವಯಸ್ಸು–55 ಜಾ–ಮುಸ್ಲಿಂ ಉ–ಕೂಲಿ,
ಸಾ: ಬ. ಬಾಗೇವಾಡಿ

ಅನುಬಂಧ–(2)

**ಫಿರ್ಯಾಧಿದಾರರ ಪರಮಂಡಿಸಲಾದ ದಾಖಲೆಗಳು**

| | |
|---|---|
| ನಿಶಾನೆ–ಪಿ–1 | ಪಂಚನಾಮೆ |
| ನಿಶಾನೆ–ಪಿ1(ಎ) | ಪ್ರಾ.ಸಾ–1 ರವರ ಸಹಿ |
| ನಿಶಾನೆ–ಪಿ–2 | ಪ್ರಥಮ ವರ್ತಮಾನ ವರದಿ |
| ನಿಶಾನೆ–ಪಿ–2(ಎ) | ಪ್ರಾ.ಸಾ.–1 ರವರ ಸಹಿ |
| ನಿಶಾನೆ–ಪಿ–3 | ಸರ್ಕಾರಿ ತರ್ಫೆ ಪಿರ್ಯಾಧಿ |
| ನಿಶಾನೆ–ಪಿ–3(ಎ) | ಪ್ರಾ.ಸಾ–1 ರವರ ಸಹಿ |
| ನಿಶಾನೆ–ಪಿ–4 | ರಸಾಯನಿಕ ತಜ್ಞರ ವರದಿ |
| ನಿಶಾನೆ–ಪಿ–1(ಬಿ) | ಪ್ರಾ.ಸಾ.–2 ರವರ ಸಹಿ |

ಅನುಬಂಧ–(3)

**ಫಿರ್ಯಾಧಿದಾರರ ಪರ ಗುರುತಿಸಲಾದ ವಸ್ತುಗಳು**

1) ಎಂ.ಓ–1 ಮಾದರಿ ಕಳ್ಳಭಟ್ಟಿ ಸಾರಾಯಿ ಬಾಟಲಿಗಳು
2) ಎಂ.ಓ–01. ಟಿವ್ಹಿಎಸ್. ಎಕ್ಸ್ ಎಲ್ ದ್ವಿಚಕ್ರ ವಾಹನ ನಂ:ಕೆ–28–ಜೆ–422

ಅನುಬಂಧ–(4)

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು**

ಇಲ್ಲಾ

ಅನುಬಂಧ–(5)

**ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು**

ಇಲ್ಲಾ

**ಕೆ.ಆರ್. ಗೌಡ್ರ**
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ
ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ

ಪಿ.ಆರ್. 324

## ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪವಿಭಾಗ–1 ವಿಜಾಪುರ ಜಿಲ್ಲೆ, ವಿಜಾಪುರ

**ಪ್ರಕರಣ ಸಂ:ಡಬ್ಲ್ಯೂಸಿಎ:ಎಸ್ಆರ್:179:07 ದಿನಾಂಕ:28ನೇ ಏಪ್ರಿಲ್ 2007**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು: |
|---|---|---|
| 1. Dilipkumar S/o Vijay Jagatap | | 1. Ashoka s/o Shekabha Naagatilak |
| 2. Bhagyashri W/o Dilipkumar jagatap | | Age, Major Occ, Sumo owner No. |
| 3. Jyoti d/o Dilipkumar Jagatap | | MH/04/CE/5267 R/o Krishna APTS Plot No. 407, |
| 4. Bharati d/o Dilipkumar Jagatap | | 4th floor Bhiwandi Thane. |
| 5. Maaduri d/o Dilipkumar Jagatap | | 2. IFFCO-TOKIO General insurance Co-ltd. |
| All are residing at Doble Galli A/p Bijapur | | Cunning Ham Road Bangalore. |

**ಪ್ರಕಟಣೆ:**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಕಿರಣಕುಮಾರ ಜಗತಾಪ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:23.4.07 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೆ ತಾವು ಮೃತರ ಅವಲಂಭಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30

ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು ಹಾಗೂ ನಿಗಧಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಎಂ.ಡಿ. ಇಂಡಿ
ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಉಪವಿಭಾಗ–1 ವಿಜಾಪೂರ

ಪಿ.ಆರ್. 662

**ಜಿಲ್ಲಾ ಅಧಿಕಾರಿಗಳ ಕಛೇರಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಹಾಸನ ಜಿಲ್ಲೆ ಹಾಸನ,**
**ಪ್ರಕಟಣೆ: ಸಂ/ಬಿಸಿಎಂ–4/ಕಾಪತ/ಸಿಆರ್–9/2007–08, ದಿನಾಂಕ:20ನೇ ಜೂನ್ 2007**

**ವಿಷಯ :** 2007–08ನೇ ಸಾಲಿಗೆ ಹಿಂದುಳಿದ ವರ್ಗಗಳ ವಿವಿಧ ಗುಂಪಿನ ಕಾನೂನು ಪದವೀಧರರಿಗೆ ನಾಲ್ಕು ವರ್ಷಗಳ ತರಬೇತಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ

**ಉಲ್ಲೇಖ :** ಸರ್ಕಾರದ ಆದೇಶ ಸಂ/ಸಕಇ/446/ಬಿಎಂಎಸ್–2005/ಬೆಂಗಳೂರು ದಿ:1.12.2005

ಉಲ್ಲೇಖದ ಸರ್ಕಾರದ ಆದೇಶಾನುಸಾರ ಹಾಸನ ಜಿಲ್ಲೆಗೆ ಸೇರಿದ (ಪರಿಶಿಷ್ಟಜಾತಿ, ಪರಿಶಿಷ್ಟ ಪಂಗಡ ಹೊರತುಪಡಿಸಿ) ಹಿಂದುಳಿದ ವರ್ಗಗಳ ಪ್ರವರ್ಗ–1,2ಎ,3ಎ, ಮತ್ತು 3ಬಿ, ಪ್ರವರ್ಗಕ್ಕೆ ಸೇರಿದ 10 ಮಂದಿ ಕಾನೂನು ಪದವೀಧರರಿಗೆ ವಕೀಲ ವೃತ್ತಿಯಲ್ಲಿ ಮತ್ತು ನ್ಯಾಯಾಂಗ ಸೇವೆಯ ಪೂರ್ವ ತರಬೇತಿ ಪಡೆಯಲು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟಂತೆ ಇಚ್ಛೆಯುಳ್ಳ ಅರ್ಹ ಅಭ್ಯರ್ಥಿಗಳಿಂದ 2007–08ನೇ ಸಾಲಿಗೆ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ನಿಬಂಧನೆಗಳು:**

1. ಅಭ್ಯರ್ಥಿಗಳು ಸರ್ಕಾರದ ಆದೇಶದಂತೆ ಹಿಂದುಳಿದ ವರ್ಗಗಳ ಪ್ರವರ್ಗ–1, 2ಎ,3ಎ, ಮತ್ತು 3ಬಿ ಪ್ರವರ್ಗಕ್ಕೆ ಸೇರಿದವರಾಗಿರಬೇಕು. ಈ ಬಗ್ಗೆ ನಿಗದಿತ ನಮೂನೆಯಲ್ಲಿ ಸಂಬಂಧಿಸಿದ ತಾಲ್ಲೂಕಿನ ತಹಶೀಲ್ದಾರ್‌ರವರಿಂದ ಜಾತಿ ಆದಾಯ ಪರಿಶೀಲನಾ ಪತ್ರವನ್ನು ಭರ್ತಿ ಮಾಡಿದ ಅರ್ಜಿಗಳೊಂದಿಗೆ ಕಳುಹಿಸಿಕೊಡಬೇಕು. ಪ್ರವರ್ಗ–1ರ ಅಭ್ಯರ್ಥಿಗಳಿಗೆ ಮೊದಲ ಆದ್ಯತೆ ನೀಡಲಾಗುವುದು. ಪ್ರವರ್ಗ–1ರ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ. ಉಳಿದ ಪ್ರವರ್ಗ–2ಎ, 3ಎ ಮತ್ತು 3ಬಿ ಗೆ ಆದಾಯ ಮಿತಿ ರೂ. 15,000–00ಗಳ ಒಳಗಡೆ ಇರಬೇಕು.

2. ತರಬೇತಿಗೆ ಆಯ್ಕೆ ಮಾಡುವ ಅಭ್ಯರ್ಥಿಗಳ ಸಂಖ್ಯೆ 10 ಜನ ಮಾತ್ರ ಆಯ್ಕೆ ಮಾಡಬೇಕಾದ ಅಭ್ಯರ್ಥಿಗಳ ಪ್ರವರ್ಗವಾರು ವಿವರ ಪ್ರವರ್ಗ–1ಶೇ–15, 2ಎ–ಶೇ–53, 3ಎ–ಶೇ–15 ಮತ್ತು ಪ್ರವರ್ಗ–3ಬಿ–ಶೇ–17.

3. ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕಕ್ಕೆ 30 ವರ್ಷಗಳ ವಯೋಮಿತಿಯಲ್ಲಿರಬೇಕು. ಪ್ರವರ್ಗ–1 ರ ಅಭ್ಯರ್ಥಿಗಳಿಗೆ ವಯೋಮಿತಿ ಗರಿಷ್ಠ 31 ವರ್ಷ ಮೀರಿರಬಾರದು.

4. ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕಕ್ಕೆ ಎರಡು ವರ್ಷದೊಳಗೆ ತೇರ್ಗಡೆಯಾದ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರಿರುತ್ತಾರೆ. ಅವಶ್ಯಕ ಮಾಹಿತಿಗಳಾದ, ಕಾನೂನು ಪದವಿಯಲ್ಲಿ ತೇರ್ಗಡೆಯಾದ ಪ್ರಮಾಣ ಪತ್ರ ಅಂಕಪಟ್ಟಿಗಳ ದೃಢೀಕರಣ ಪ್ರತಿ, ಜನ್ಮ ದಿನಾಂಕ ದೃಢೀಕರಿಸಲು ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ.ಸಿ. ದೃಢೀಕರಣ ಪ್ರತಿಗಳನ್ನು ಅರ್ಜಿಗಳೊಂದಿಗೆ ಲಗತ್ತಿಸಬೇಕು.

5. ಆಯ್ಕೆಯಾದ ಅಭ್ಯರ್ಥಿಗಳಿಗೆ ನಾಲ್ಕು ವರ್ಷ ತರಬೇತಿ ನೀಡಲಾಗುವುದು. ಮತ್ತು ಮಾಹೆಯಾನ ರೂ, 1000–00 (ಒಂದು ಸಾವಿರ ರೂಪಾಯಿ ಮಾತ್ರ) ತರಬೇತಿ ಭತ್ಯೆ ನೀಡಲಾಗುವುದು. ತರಬೇತಿಯ ಮಧ್ಯಂತರದಲ್ಲಿ ಬಿಟ್ಟು ಹೋಗಬಾರದು. ಆದರೆ ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದಲ್ಲಿ ಉದ್ಯೋಗ ದೊರೆತು, ಮಧ್ಯಂತರ ಅವಧಿಯಲ್ಲಿ ಬಿಟ್ಟು ಹೋಗುವವರಿಗೆ ಈ ನಿಬಂಧನೆಗಳು ಅನ್ವಯಿಸುವುದಿಲ್ಲ.

6. ನಿಗದಿ ಪಡಿಸಿದ ದಿನಾಂಕದ ನಂತರ ಬಂದ ಅರ್ಜಿಗಳು ಅಪೂರ್ಣ ಹಾಗೂ ಅನರ್ಹ ಅರ್ಜಿಗಳೆಂದು ತಿರಸ್ಕರಿಸಲಾಗುವುದು.

7. ಪರಿಪೂರ್ಣ ಮಾಹಿತಿಯೊಂದಿಗೆ ಸ್ವೀಕೃತವಾದ ಅರ್ಜಿಯ ಪರಿಶೀಲನೆ ನಂತರ ಆಯ್ಕೆ ಸಮಿತಿಯು ನಿರ್ದಿಷ್ಟ ಪಡಿಸಿದ ಸ್ಥಳ ಮತ್ತು ವೇಳೆಗೆ ಸಂದರ್ಶನಕ್ಕೆ ಕರೆಯಲಾಗುವುದು.

8. ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಅಥವಾ ಕನಿಷ್ಠ 20 ವರ್ಷಗಳ ವಕೀಲ ವೃತ್ತಿಯ ಅನುಭವವುಳ್ಳ ವಕೀಲರ ಅಧೀನದಲ್ಲಿ ತರಬೇತಿಗೆ ನಿಯೋಜಿಸಲಾಗುವುದು.

9. ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಮುಖಾಂತರ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

10. ಆಯ್ಕೆಯಾದ ಅಭ್ಯರ್ಥಿಗಳಿಗೆ 15 ದಿವಸಗಳ ಕಾಲಾವಕಾಶ ನೀಡಿ ಒಪ್ಪಿಗೆ ಸೂಚಿಸಲು ತಿಳಿಸಲಾಗುವುದು ತರಬೇತಿಯ ಮಧ್ಯದಲ್ಲಿ ಬಿಟ್ಟು ಹೋಗದಿರುವ ಬಗ್ಗೆ ಕರಾರು ಪತ್ರ ಬರೆದು ಕೊಡತಕ್ಕದ್ದು.

11. ಆಯ್ಕೆಯಾದ ಅಭ್ಯರ್ಥಿಗಳು ನಿಗಧಿಪಡಿಸಿದ ದಿನಾಂಕದೊಳಗೆ ಲಿಖಿತ ಒಪ್ಪಿಗೆ ಸೂಚಿಸದಿದ್ದಲ್ಲಿ ಅಥವಾ ತರಬೇತಿಗೆ ಹಾಜರಾಗಲು ತಿರಸ್ಕರಿಸಿದಲ್ಲಿ ಸದರಿ ಅಭ್ಯರ್ಥಿಯ ಆಯ್ಕೆಯನ್ನು ರದ್ದುಪಡಿಸಿ, ಕಾಯ್ದಿಟ್ಟ ಪಟ್ಟಿಯಿಂದ ಮತ್ತೊಬ್ಬ ಅರ್ಹ ಅಭ್ಯರ್ಥಿಯನ್ನು ಆಯ್ಕೆ ಮಾಡಲಾಗುವುದು.

12. ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ನೀಡಿದಲ್ಲಿ ಅಥವಾ ತರಬೇತಿಯಿಂದ ಮಧ್ಯದಲ್ಲಿ ಬಿಟ್ಟು ಹೋದಲ್ಲಿ ಸರ್ಕಾರವು ಸದರಿ ಅಭ್ಯರ್ಥಿಯ ಮೇಲೆ ಖರ್ಚು ಮಾಡಲಾದ ಹಣವನ್ನು ವರ್ಷಕ್ಕೆ ಶೇ. 10ರ ಬಡ್ಡಿಯೊಂದಿಗೆ ಭೂ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು. ಹಾಗೂ ಶಿಕ್ಷೆಗೆ ಗುರಿಪಡಿಸಲಾಗುವುದು.

13. ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ತಮ್ಮ ಹೆಸರನ್ನು ನೊಂದಾಯಿಸಿರಬೇಕು. ಮತ್ತು ಈ ಬಗ್ಗೆ ದಾಖಲೆ ಒದಗಿಸಬೇಕು.

14. ನಿಗಧಿತ ಅರ್ಜಿ ಫಾರಂಗಳನ್ನು ಈ ಕಛೇರಿಯಿಂದ ಉಚಿತವಾಗಿ ಪಡೆಯಬಹುದಾಗಿದೆ.

15. ಅಭ್ಯರ್ಥಿಯು ಭರ್ತಿ ಮಾಡಿದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರ ಜಿಲ್ಲಾ ಮಟ್ಟದ ಆಯ್ಕೆ ಸಮಿತಿ ಮತ್ತು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಹೆಚ್.ಕೆ.ಬಿ. ವಾಣಿಜ್ಯ ಸಂಕೀರ್ಣ, 2ನೇ ಮಹಡಿ, 23ನೇ ಅಡ್ಡರಸ್ತೆ, ಕುವೆಂಪುನಗರ, ಹಾಸನ ಇವರಿಗೆ ದಿನಾಂಕ:25.7.2007ರ ಸಂಜೆ 5.30ರ ಒಳಗೆ ಸಲ್ಲಿಸತಕ್ಕದ್ದು ಅವಧಿ ಮೀರಿ ಬಂದ ಅರ್ಜಿಯನ್ನು ತಿರಸ್ಕರಿಸಲಾಗುವುದು.

ಪಿ.ಆರ್. 881

ಜಿಲ್ಲಾ ಅಧಿಕಾರಿ ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಹಾಸನ

**ಜಿಲ್ಲಾ ಅಧಿಕಾರಿಗಳ ಕಛೇರಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಹಾಸನ ಜಿಲ್ಲೆ ಹಾಸನ,**
**ಪ್ರಕಟಣೆ: ಸಂ/ಬಿಸಿಎಂ–4/ಕಾಪತ/ಸಿಆರ್–12/2007–08, ದಿನಾಂಕ:28ನೇ ಜೂನ್ 2007**

**ವಿಷಯ :** 2007–08ನೇ ಸಾಲಿಗೆ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ನಾಲ್ಕು ವರ್ಷಗಳ ತರಬೇತಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ/ಸಕಇ/205/ಬಿಎಂಎಸ್–99/ಬೆಂಗಳೂರು ದಿ:7.10.99.

ಉಲ್ಲೇಖದ ಸರ್ಕಾರದ ಆದೇಶಾನುಸಾರ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ವಕೀಲ ವೃತ್ತಿಯಲ್ಲಿ ಮತ್ತು ನ್ಯಾಯಾಂಗ ಸೇವೆಗೆ ಸಂಬಂಧಿಸಿದಂತೆ ನ್ಯಾಯಾಂಗ ಆಡಳಿತದಲ್ಲಿ 04 ವರ್ಷಗಳ ತರಬೇತಿ ನೀಡುವ ಕುರಿತು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟಂತೆ ಇಚ್ಚೆಯುಳ್ಳ ಅರ್ಹ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಂದ 2007–08ನೇ ಸಾಲಿಗೆ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ನಿಬಂಧನೆಗಳು:**

1. ಕಾನೂನು ಪದವಿ (ಎಲ್.ಎಲ್.ಬಿ) ಪಾಸುಮಾಡಿದ ಮತೀಯ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ ಅಭ್ಯರ್ಥಿಯಾಗಿರಬೇಕು ಕ್ರಿಶ್ಚಿಯನ್, ಜೈನ್, ಮುಸ್ಲಿಂ, ಬೌದ್ಧ, ಸಿಖ್ ಮತ್ತು ಪಾರ್ಸಿ ಸಮುದಾಯಗಳಿಗೆ ಸೇರಿದವರಾಗಿರಬೇಕು. ವಕೀಲ ವೃತ್ತಿ ಅಭ್ಯಾಸಕ್ಕೆ (ಪ್ರಾಕ್ಟೀಸ್) ನಿಗಧಿಪಡಿಸಿರುವ ಅರ್ಹತೆ ಹೊಂದಿದ್ದು, ಕಾನೂನು ಪದವಿ ಪಡೆದ 02 ವರ್ಷ ಅವಧಿಯೊಳಗಿರಬೇಕು.

2. ಪ್ರಸಕ್ತ ಸಾಲಿನಲ್ಲಿ ತರಬೇತಿ ಭತ್ಯೆಗೆ ಜಿಲ್ಲೆಯಿಂದ 2 ಅಭ್ಯರ್ಥಿಗಳನ್ನು ಮಾತ್ರ ಆಯ್ಕೆಮಾಡಲಾಗುವುದು.

3. ಅಭ್ಯರ್ಥಿಗಳ ಪಾಲಕರ/ಪೋಷಕರ ವರಮಾನ ರೂ. 15000–00ಗಳ ಒಳಗಿರಬೇಕು. ಪ್ರವರ್ಗ–1ರಡಿ ಬರುವ ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆದಾಯಮಿತಿ ಇರುವುದಿಲ್ಲ.

4. ತರಬೇತಿ ಅವಧಿ ನಾಲ್ಕು ವರ್ಷಗಳು ತರಬೇತಿ ಅವಧಿಯಲ್ಲಿ ಮಾಹೆಯಾನ ರೂ. 1000–00 (ಒಂದು ಸಾವಿರ ರೂಪಾಯಿ ಮಾತ್ರ) ತರಬೇತಿ ಭತ್ಯೆ ನೀಡಲಾಗುವುದು.

5. ಈ ಸೌಲಭ್ಯ ಪಡೆಯಲಿಚ್ಚಿಸುವ ಅಭ್ಯರ್ಥಿಗಳ ವಯೋಮಿತಿ 30 ವರ್ಷಗಳು ಮೀರಿರಬಾರದು.

6. ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಅಥವಾ ಕನಿಷ್ಟ 20 ವರ್ಷಗಳ ವಕೀಲ ವೃತ್ತಿಯ ಅನುಭವವುಳ್ಳ ವಕೀಲರ ಹತ್ತಿರ ತರಬೇತಿಗೆ ನಿಯೋಜಿಸಲಾಗುವುದು.

7. ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ತಮ್ಮ ಹೆಸರನ್ನು ನೊಂದಾಯಿಸಿರತಕ್ಕದ್ದು ಮತ್ತು ಈ ಬಗ್ಗೆ ದಾಖಲೆ ಒದಗಿಸುವುದು.

8. ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಆದಾಯ ಜಾತಿ ಪ್ರಮಾಣ ಪತ್ರವನ್ನು ನೀಡಿ ಆಯ್ಕೆಯಾಗಿರುವುದು ಕಂಡುಬಂದಲ್ಲಿ ಶಿಕ್ಷೆಗೆ ಗುರಿಪಡಿಸಿ ಭತ್ಯೆ ನೀಡುವ ಒಟ್ಟು ಹಣದ ಜೊತೆಗೆ ಶೇಕಡಾ 10 ರಷ್ಟು ಬಡ್ಡಿ ಸೇರಿಸಿ, ಭೂಕಂದಾಯ ಬಾಕಿ ರೂಪದಲ್ಲಿ ವಸೂಲಿ ಮಾಡಲಾಗುವುದು.

9. ನಿಗಧಿತ ಅರ್ಜಿ ಫಾರಂಗಳನ್ನು ಈ ಕಛೇರಿಯಿಂದ ಉಚಿತವಾಗಿ ಪಡೆಯಬಹುದಾಗಿದೆ.

10. ಅಭ್ಯರ್ಥಿಯು ಭರ್ತಿ ಮಾಡಿದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರ ಜಿಲ್ಲಾ ಮಟ್ಟದ ಆಯ್ಕೆ ಸಮಿತಿ ಮತ್ತು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಹೆಚ್.ಕೆ.ಬಿ. ವಾಣಿಜ್ಯ ಸಂಕೀರ್ಣ, 2ನೇ ಮಹಡಿ 23ನೇ ಅಡ್ಡರಸ್ತೆ ಕುವೆಂಪುನಗರ, ಹಾಸನ ಇವರಿಗೆ ದಿನಾಂಕ:25.7.2007ರ ಸಂಜೆ 5–30 ಒಳಗೆ ಸಲ್ಲಿಸತಕ್ಕದ್ದು ಅವಧಿ ಮೀರಿ ಬಂದ ಅರ್ಜಿಯನ್ನು ತಿರಸ್ಕರಿಸಲಾಗುವುದು.

ಪಿ.ಆರ್. 882

ಜಿಲ್ಲಾ ಅಧಿಕಾರಿ ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಹಾಸನ

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ತಿದ್ದುಪಡಿ ಅಧಿಕೃತ ಜ್ಞಾಪನ

**ನಂ.ಎಲ್.ಎನ್.ಡಿ. (ಎನ್)ಸಿಆರ್ 420/05-06 ಬೆಂಗಳೂರು, ದಿನಾಂಕ:15ನೇ ಜೂನ್ 2007**

**ವಿಷಯ:** ಬೆಂಗಳೂರು ನಗರ ಬೆಂಗಳೂರು ಉತ್ತರ ತಾಲ್ಲೂಕು ವ್ಯಾಪ್ತಿಯಲ್ಲಿರುವ ಕೆಂಪೇಗೌಡ ರಸ್ತೆಯಲ್ಲಿರುವ ತಾಲ್ಲೂಕು ಕಛೇರಿ ಆವರಣದಲ್ಲಿ ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ವಿಕಾಸ ಬ್ಯಾಂಕ್( ನಬಾರ್ಡು) ಇವರಿಗೆ 1-00 ಎಕರೆ (ಒಂದು ಎಕರೆ ಮಾತ್ರ) ಜಮೀನು ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ:ಆರ್.ಡಿ ಡಿ.ಡಬ್ಲ್ಯೂ ಬಿಆರ್. 72/05 ದಿನಾಂಕ:3.5.2005.

2) ಜನರಲ್ ಮ್ಯಾನೇಜರ್ ನಬಾರ್ಡ್, ಇವರಿಗೆ ಬರೆದ ಈ ಕಛೇರಿಯ ಸಮ ಸಂಖ್ಯೆಯ ಪತ್ರದ ದಿ:28.5.2007.

3) ಈ ಕಛೇರಿಯ ಕ್ರಮ ಸಂಖ್ಯೆಯ ಆದೇಶ ದಿ:8.5.2006.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ(1)ರ ಸರ್ಕಾರದ ಆದೇಶದಂತೆ, ಬೆಂಗಳೂರು ಉತ್ತರ ತಾಲ್ಲೂಕು,. ಕೆಂಪೇಗೌಡ ರಸ್ತೆಯಲ್ಲಿರುವ ತಾಲ್ಲೂಕು ಕಛೇರಿಯ ಆವರಣದಲ್ಲಿ ಇರುವ 1-00 ಎಕರೆ ಜಮೀನನ್ನು ನಬಾರ್ಡ್ ಇವರಿಗೆ ಪ್ರಾದೇಶಿಕ ಕಛೇರಿ ನಿರ್ಮಿಸಲು ಚದರಡಿ ಒಂದಕ್ಕೆ ರೂ. 5,000-00 ಗಳಂತೆ ಕಿಮ್ಮತ್ತು ವಿಧಿಸಿ ಮಂಜೂರು ಮಾಡಲಾಗಿದ್ದು, ಇದರಲ್ಲಿನ ಒಂದು ಎಕರೆ ಜಮೀನಿನ ಮೌಲ್ಯ 21,78,00,000-00 ಗಳಾಗಿದ್ದು, ನಬಾರ್ಡ್ ಇವರು ದಿನಾಂಕ: 3.9.2006 ರ ಈ ಕಛೇರಿಯ ಸಮ ಸಂಖ್ಯೆಯ ತಿಳುವಳಿಕೆ ಪತ್ರದಂತೆ 21,40,00,000-00 ಗಳನ್ನು ಪಾವತಿಸಿದ್ದು, ಬಾಕಿ ಮೊತ್ತ 38,00,000-00 (ಮೂವತ್ತೆಂಟು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಉಲ್ಲೇಖ (3)ರ ಈ ಕಛೇರಿಯ ಪತ್ರದಲ್ಲಿ ತಿಳಿಸಲಾಗಿರುತ್ತದೆ.

ಅದರಂತೆ ಜನರಲ್ ಮ್ಯಾನೇಜರ್ ನಬಾರ್ಡ್ ಸಂಸ್ಥೆಯವರು ರೂ. 38,00,000-00(ಮೂವತ್ತೆಂಟು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಇವರ ಡಿ.ಡಿ.ನಂ. 538238 ದಿ:8.6.2007ರಲ್ಲಿ ಜಿಲ್ಲಾಧಿಕಾರಿಗಳು ಬೆಂಗಳೂರು ಜಿಲ್ಲೆ ಹೆಸರಿನಲ್ಲಿ ಪಡೆದು ಪಾವತಿಸಿರುತ್ತಾರೆ.

ಅದರಂತೆ ಉಲ್ಲೇಖ(2)ರ ದಿನಾಂಕ:8.5.2006ರ ಈ ಕಛೇರಿಯಲ್ಲಿನ ಆದೇಶದಲ್ಲಿ ತಿಳಿಸಿರುವ ಒಂದು ಎಕರೆ ಜಮೀನಿನ ಕಿಮ್ಮತ್ತು 21,40,00,000-00ಗಳ ಬದಲಾಗಿ ರೂ. 21,78,00,000-00ಗಳೆಂದು (ಇಪ್ಪತ್ತೊಂದು ಕೋಟಿ ಎಪ್ಪತ್ತೆಂಟು ಲಕ್ಷ ರೂಪಾಯಿಗಳು ಮಾತ್ರ) ಓದಿಕೊಳ್ಳತಕ್ಕದ್ದು. ಬಾಕಿ ಷರತ್ತುಗಳಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಪಿ.ಆರ್. 883

ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

## ಪ್ರಾದೇಶಿಕ ಸಾರಿಗೆ ಪ್ರಾಧಿಕಾರ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು

### ಅಧಿಸೂಚನೆ

**ಸಂಖ್ಯೆ: ಪ್ರಾ.ಸಾ.ಪ್ರಾ: ಬೆಂ(ನ): ಆಟೋ: ರಹದಾ:15:2007-08, ಬೆಂಗಳೂರು, ದಿನಾಂಕ:12ನೇ ನವೆಂಬರ್, 2007**

ಬೆಂಗಳೂರು ನಗರ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಪ್ರಾಧಿಕಾರವು ಬೆಂಗಳೂರು ನಗರದಲ್ಲಿ 2-ಸ್ಟ್ರೋಕ್ ಇಂಜಿನ್ ಅಳವಡಿಸಿರುವ ಆಟೋರಿಕ್ಷಾಗಳು ಹೆಚ್ಚಿನ ಶಬ್ಧ ಮಾಲಿನ್ಯಕ್ಕೆ ಕಾರಣವೆಂಬ ಅಂಶವನ್ನು ಪರಿಗಣಿಸಿ ಶಬ್ಧ ಮಾಲಿನ್ಯವನ್ನು ಸಮರ್ಪಕವಾಗಿ ನಿಯಂತ್ರಿಸಲು ಇನ್ನು ಮುಂದೆ 4-ಸ್ಟ್ರೋಕ್ ಇಂಜಿನ್ ಉಳ್ಳ ಆಟೋರಿಕ್ಷಾಗಳಿಗೆ ಮಾತ್ರ ರಹದಾರಿ ಮಂಜೂರು ಮಾಡಲು ವಿಷಯ ಸಂಖ್ಯೆ:15/2007-08ರಲ್ಲಿ ನಿರ್ಣಯ ತೆಗೆದುಕೊಂಡಿರುತ್ತದೆ. ಪ್ರಾಧಿಕಾರದ ಈ ನಿರ್ಣಯವನ್ನು ಜಾರಿಗೊಳಿಸಲು ಬೆಂಗಳೂರು ನಗರ ಪ್ರಾದೇಶಿಕ ಸಾರಿಗೆ ಪ್ರಾಧಿಕಾರವು ಮೋಟಾರು ವಾಹನಗಳ ಕಾಯಿದೆಯ ಕಲಂ 74(2)ರ ಉಪ ಕಲಂ (xiii) ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ನಗರದಲ್ಲಿ ಸಂಚರಿಸುವ ಆಟೋರಿಕ್ಷಾ ಕ್ಯಾಬ್‌ಗಳ ರಹದಾರಿಗಳಲ್ಲಿ ಕೆಳಕಂಡ ಹೆಚ್ಚುವರಿ ಷರತ್ತನ್ನು ವಿಧಿಸಿ ಆದೇಶಿಸಿರುತ್ತದೆ:

### ಹೆಚ್ಚುವರಿ ಷರತ್ತು

ಈಗಾಗಲೇ ನೊಂದಣಿಯಾಗಿರುವ 2-ಸ್ಟ್ರೋಕ್ ಇಂಜಿನ್ ಉಳ್ಳ ಆಟೋರಿಕ್ಷಾಗಳು ಮತ್ತು ಅವುಗಳಿಗೆ ರಹದಾರಿ ಕೋರಿ ಅರ್ಜಿಗಳನ್ನು ಸಲ್ಲಿಸಿ, ಈ ರಹದಾರಿಗಳ ಮಂಜೂರಾತಿ ಕುರಿತಂತೆ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಬಾಕಿ ಇರುವ ಪ್ರಕರಣಗಳನ್ನು ಹೊರತುಪಡಿಸಿ ಉಳಿದಂತೆ 4-ಸ್ಟ್ರೋಕ್ ಇಂಜಿನ್ ಉಳ್ಳ ಮತ್ತು ಅಧಿಕೃತ ಎಲ್.ಪಿ.ಜಿ. ಕಿಟ್ ಅಳವಡಿಸಿರುವ ಆಟೋರಿಕ್ಷಾಗಳಿಗೆ ಮಾತ್ರ ಹೊಸ ರಹದಾರಿ ನೀಡಲು ಮತ್ತು ರಹದಾರಿಯಲ್ಲಿ ಹೊಸ ವಾಹನ ಬದಲಾವಣೆ ಮಾಡುವ ಸಂದರ್ಭದಲ್ಲಿ ಕೇವಲ 4-ಸ್ಟ್ರೋಕ್ ಇಂಜಿನ್ ಉಳ್ಳ ಆಟೋರಿಕ್ಷಾಗಳಿಗೆ ಮಾತ್ರ ರಹದಾರಿಯಲ್ಲಿ ವಾಹನ ಬದಲಾವಣೆಗೆ ಅನುಮತಿ ನೀಡಲಾಗುವುದು.

ಈ ಹೆಚ್ಚುವರಿ ಷರತ್ತು ದಿನಾಂಕ:01.01.2008ರಿಂದ ಜಾರಿಗೆ ಬರತಕ್ಕದ್ದು.

ಅಧ್ಯಕ್ಷರು,
ಪ್ರಾದೇಶಿಕ ಸಾರಿಗೆ ಪ್ರಾಧಿಕಾರ ಹಾಗೂ
ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ.

**ಪ್ರಾದೇಶಿಕ ಸಾರಿಗೆ ಪ್ರಾಧಿಕಾರ, ಬೆಂಗಳೂರು ನಗರ ಜಿಲ್ಲೆ, ಇವರ ಮುಂದೆ ಕರ್ನಾಟಕ ಮೋಟಾರು ವಾಹನ ನಿಯಮಾವಳಿಗಳು 1989ರ ನಿಯಮ 54ರ ರೀತ್ಯಾ ಮಂಡಿಸಿರುವ ಸುತ್ತೋಲೆ ವಿಷಯಗಳು**

**ವಿಷಯ ಸಂಖ್ಯೆ: 15/ 2007-08, ದಿನಾಂಕ:12ನೇ ನವೆಂಬರ್, 2007**

ಬೆಂಗಳೂರು ನಗರದಲ್ಲಿ ಶಬ್ಧ ಮಾಲಿನ್ಯ ನಿಯಂತ್ರಿಸಲು ಇನ್ನು ಮುಂದೆ 4-ಸ್ಟ್ರೋಕ್ ಇಂಜಿನ್ ಉಳ್ಳ ಆಟೋರಿಕ್ಷಾಗಳಿಗೆ ಮಾತ್ರ ರಹದಾರಿ ನೀಡುವ ಬಗ್ಗೆ.

**ಟಿಪ್ಪಣಿ:**

ಬೆಂಗಳೂರು ನಗರದಲ್ಲಿ ಇತ್ತೀಚಿಗೆ ವಾಹನಗಳಿಂದ ಉಂಟಾಗುತ್ತಿರುವ ಶಬ್ಧ ಮಾಲಿನ್ಯವು ಹೆಚ್ಚಾಗುತ್ತಿದ್ದು, ಈ ಸಮಸ್ಯೆ ಬಗ್ಗೆ ಸಾರ್ವಜನಿಕರಿಂದ ಹಲವಾರು ದೂರುಗಳು ಬಂದಿರುವುದು ಪ್ರಾದೇಶಿಕ ಸಾರಿಗೆ ಪ್ರಾಧಿಕಾರದ ಗಮನಕ್ಕೆ ಬಂದಿರುತ್ತದೆ. ನಗರದಲ್ಲಿ ವಾಹನಗಳಿಂದುಂಟಾಗುತ್ತಿರುವ ಶಬ್ಧ ಮಾಲಿನ್ಯಕ್ಕೆ ಪ್ರಮುಖವಾಗಿ ಆಟೋರಿಕ್ಷಾಗಳು ಕಾರಣ ಎಂಬುದಾಗಿ ತಿಳಿದು ಬಂದಿದೆ. ಈ ಆಟೋರಿಕ್ಷಾಗಳ ಪೈಕಿ 2-ಸ್ಟ್ರೋಕ್ ಇಂಜಿನ್ ಉಳ್ಳ ಆಟೋರಿಕ್ಷಾಗಳಿಂದ ಹೆಚ್ಚಿನ ಶಬ್ಧ ಮಾಲಿನ್ಯ ಉಂಟಾಗುತ್ತಿರುವುದಾಗಿ ತಿಳಿದು ಬಂದಿದೆ. 2-ಸ್ಟ್ರೋಕ್ ಇಂಜಿನ್ ಉಳ್ಳ ಆಟೋರಿಕ್ಷಾಗಳಲ್ಲಿ ಅಳವಡಿಸಿರುವ ಸೈಲನ್ಸರ್ ಅನ್ನು ಸುಲಭವಾಗಿ ಬದಲಾವಣೆ ಮಾಡಲು ಅಥವಾ ಟ್ಯಾಂಪರ್ ಮಾಡಲು ಅವಕಾಶವಿರುವುದರಿಂದ ಆಟೋ ಚಾಲಕರು ಮತ್ತು ಮೆಕಾನಿಕ್‌ಗಳು ಈ ವಾಹನಗಳ ಸೈಲೆನ್ಸರ್‌ಗಳನ್ನು ಟ್ಯಾಂಪರ್ ಮಾಡುವುದರಿಂದ ಶಬ್ಧ ಹೆಚ್ಚಾಗುತ್ತಿರುವುದಾಗಿ ಪ್ರಾಧಿಕಾರದ ಗಮನಕ್ಕೆ ಬಂದಿರುತ್ತದೆ. ಈಗ 4-ಸ್ಟ್ರೋಕ್ ಇಂಜಿನ್ ಇರುವ ಆಟೋರಿಕ್ಷಾಗಳು ತಯಾರಾಗುತ್ತಿದ್ದು ಮಾರುಕಟ್ಟೆಯಲ್ಲಿ ಲಭ್ಯವಿರುತ್ತವೆ. ಈ ಆಟೋರಿಕ್ಷಾಗಳಲ್ಲಿ ಸೈಲನ್ಸರ್ ಅನ್ನು ಸುಲಭವಾಗಿ ಟ್ಯಾಂಪರ್ ಮಾಡಲು ಸಾಧ್ಯವಿಲ್ಲದ ರೀತಿಯಲ್ಲಿ ತಯಾರಾಗಿರುವ ವಾಹನಗಳು ಮಾರುಕಟ್ಟೆಯಲ್ಲಿ ಲಭ್ಯವಿರುತ್ತವೆ. 4-ಸ್ಟ್ರೋಕ್ ಇಂಜಿನ್ ಉಳ್ಳ ಆಟೋರಿಕ್ಷಾಗಳಲ್ಲಿ ಸೈಲನ್ಸರ್ ಉತ್ತಮವಾಗಿರುವುದರಿಂದ ಹೆಚ್ಚಿನ ಶಬ್ಧ ಹೊರಹಾಕುತ್ತಿಲ್ಲವೆಂಬ ಅಂಶವು ಪ್ರಾಧಿಕಾರದ ಗಮನಕ್ಕೆ ಬಂದಿದೆ.

ದಿನಾಂಕ:07.09.2007ರಂದು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಮತ್ತು ಸಂಚಾರಿ ಪೊಲೀಸ್ ಅಧಿಕಾರಿಗಳ ಸಭೆಯಲ್ಲಿ ಬೆಂಗಳೂರು ನಗರದಲ್ಲಿ ಶಬ್ಧ ಮಾಲಿನ್ಯ ಮತ್ತು ವಾಯು ಮಾಲಿನ್ಯವನ್ನು ನಿಯಂತ್ರಿಸಲು ಇನ್ನು ಮುಂದೆ 4-ಸ್ಟ್ರೋಕ್ ಆಟೋರಿಕ್ಷಾಗಳಿಗೆ ಮಾತ್ರ ರಹದಾರಿ ಮಂಜೂರು ಮಾಡಲು ನಿರ್ಣಯಿಸಲಾಗಿದೆ.

ಆದುದರಿಂದ ಇನ್ನು ಮುಂದೆ 4-ಸ್ಟ್ರೋಕ್ ಇಂಜಿನ್ ಇರುವ ಮತ್ತು ಅಧಿಕೃತ ಎಲ್.ಪಿ.ಜಿ. ಕಿಟ್ ಅಳವಡಿಸಿರುವ ಆಟೋರಿಕ್ಷಾಗಳಿಗೆ ಮಾತ್ರ ರಹದಾರಿ ನೀಡುವ ಬಗ್ಗೆ ಪರಿಗಣಿಸುವುದು ಸೂಕ್ತವಾಗಿರುತ್ತದೆ. ಆದರೆ ಈಗಾಗಲೇ ಹಲವು 2-ಸ್ಟ್ರೋಕ್ ಇಂಜಿನ್ ಇರುವ ಆಟೋರಿಕ್ಷಾಗಳು ನೊಂದಣಿಯಾಗಿರುತ್ತವೆ. ಹಾಗೂ ಈ ಆಟೋರಿಕ್ಷಾಗಳಿಗೆ ರಹದಾರಿ ಕೋರಿ ಅರ್ಜಿಗಳನ್ನು ಸಲ್ಲಿಸಿರುತ್ತಾರೆ ಮತ್ತು ಈ ರಹದಾರಿಗಳ ಮಂಜೂರಾತಿ ಕುರಿತಂತೆ ರಾಜ್ಯದ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಯು ಬಾಕಿ ಇರುತ್ತದೆ. ಆದುದರಿಂದ ಈಗಾಗಲೇ ನೊಂದಣಿಯಾಗಿ, ನ್ಯಾಯಾಲಯದಲ್ಲಿರುವ ಪ್ರಕರಣಗಳನ್ನು ಹೊರತುಪಡಿಸಿ ಉಳಿದಂತೆ ಇನ್ನು ಮುಂದೆ 4-ಸ್ಟ್ರೋಕ್ ಇಂಜಿನ್ ಉಳ್ಳ ಮತ್ತು ಅಧಿಕೃತ ಎಲ್.ಪಿ.ಜಿ. ಕಿಟ್ ಅಳವಡಿಸಿರುವ ಆಟೋರಿಕ್ಷಾಗಳಿಗೆ ಮಾತ್ರ ಹೊಸ ರಹದಾರಿ ನೀಡಲು ಮತ್ತು ರಹದಾರಿಯಲ್ಲಿ ಹೊಸ ವಾಹನ ಬದಲಾವಣೆ ಮಾಡುವ ಸಂದರ್ಭದಲ್ಲಿ ಕೇವಲ 4-ಸ್ಟ್ರೋಕ್ ಇಂಜಿನ್ ಉಳ್ಳ ಆಟೋರಿಕ್ಷಾಗಳಿಗೆ ಮಾತ್ರ ರಹದಾರಿಯಲ್ಲಿ ವಾಹನ ಬದಲಾವಣೆಗೆ ಅನುಮತಿ ನೀಡುವ ಬಗ್ಗೆ ಪ್ರಾಧಿಕಾರದ ಆದೇಶ ಕೋರಿ ಮಂಡಿಸಿದೆ.

**ನಿರ್ಣಯ:**

ಬೆಂಗಳೂರು ನಗರದಲ್ಲಿ ವಾಹನಗಳಿಂದ ಉಂಟಾಗುತ್ತಿರುವ ಶಬ್ಧ ಮಾಲಿನ್ಯವನ್ನು ಸಮರ್ಪಕವಾಗಿ ಮತ್ತು ಪರಿಣಾಮಕಾರಿಯಾಗಿ ನಿಯಂತ್ರಿಸಲು ಬೆಂಗಳೂರು ನಗರ ಪ್ರಾದೇಶಿಕ ಸಾರಿಗೆ ಪ್ರಾಧಿಕಾರವು ಮೋಟಾರು ವಾಹನಗಳ ಕಾಯಿದೆಯ ಕಲಂ 74(2)ರ ಉಪಕಲಂ (xiii) ರಲ್ಲಿ ಪ್ರದತ್ತವಾಗಿರುವ ಅಧಿಕಾರದಡಿಯಲ್ಲಿ ಈಗಾಗಲೇ ನೊಂದಣಿಯಾಗಿರುವ 2-ಸ್ಟ್ರೋಕ್ ಇಂಜಿನ್ ಉಳ್ಳ ಆಟೋರಿಕ್ಷಾಗಳು ಮತ್ತು ಅವುಗಳಿಗೆ ರಹದಾರಿ ಕೋರಿ ಅರ್ಜಿಗಳನ್ನು ಸಲ್ಲಿಸಿದ್ದು, ಅವುಗಳಿಗೆ ಸಂಬಂಧಿಸಿದಂತೆ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಬಾಕಿ ಇರುವ ಪ್ರಕರಣಗಳನ್ನು ಹೊರತುಪಡಿಸಿ ಉಳಿದಂತೆ ದಿನಾಂಕ:01.01.2008 ರಿಂದ ಜಾರಿಗೆ ಬರುವಂತೆ 4-ಸ್ಟ್ರೋಕ್ ಇಂಜಿನ್ ಉಳ್ಳ ಮತ್ತು ಅಧಿಕೃತ ಎಲ್.ಪಿ.ಜಿ. ಕಿಟ್ ಅಳವಡಿಸಿರುವ ಆಟೋರಿಕ್ಷಾಗಳಿಗೆ ಮಾತ್ರ ಹೊಸ ರಹದಾರಿ, ನೀಡಲು ಮತ್ತು ರಹದಾರಿಯಲ್ಲಿ ಹೊಸ ವಾಹನ ಬದಲಾವಣೆ ಮಾಡುವ ಸಂದರ್ಭದಲ್ಲಿ ಕೇವಲ 4-ಸ್ಟ್ರೋಕ್ ಇಂಜಿನ್ ಉಳ್ಳ ಆಟೋರಿಕ್ಷಾಗಳಿಗೆ ಮಾತ್ರ ರಹದಾರಿಯಲ್ಲಿ ವಾಹನ ಬದಲಾವಣೆಗೆ ಅನುಮತಿ ನೀಡಲು ಹಾಗೂ ಈ ಬಗ್ಗೆ ರಹದಾರಿಗಳಲ್ಲಿ ಹೆಚ್ಚುವರಿ ಷರತ್ತನ್ನು ವಿಧಿಸಲು ನಿರ್ಣಯಿಸಲಾಯಿತು.

ಸದಸ್ಯರು,
ಪ್ರಾದೇಶಿಕ ಸಾರಿಗೆ ಪ್ರಾಧಿಕಾರ ಹಾಗೂ
ಉಪ ಪೊಲೀಸ್ ಆಯುಕ್ತರು (ಸಂಚಾರ) ಬೆಂಗಳೂರು ಪೂರ್ವ.

ಅಧ್ಯಕ್ಷರು,
ಪ್ರಾದೇಶಿಕ ಸಾರಿಗೆ ಪ್ರಾಧಿಕಾರ ಹಾಗೂ
ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ.

ಪಿ.ಡಿ.139